# ಮಾನಸಿ

ಡಿಸಂಬರ್ 2005 ತಿಂಗಳ ಪತ್ರಿಕೆ

- 'ಸಾರಾ ಜೋಸೆಫ್' - ಜಾತಿ -ಧರ್ಮದ ಬಗ್ಗೆ
- 'ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರನ್ನು ತಪ್ಪಿಸುವ ಕಾಯಿದೆ - 2005'
- ಲೈವ್‌ಬ್ಯಾಂಡ್ ಹುಡುಗಿಯರ ದುಸ್ತರ ಬದುಕು
- ಆ ಹೆಣ್ಣು ನಾನಲ್ಲ
- ಹಸಿವು ಹಾಗೆ.......
- ದ್ವಿತ್ವ ಪುಸ್ತಕ ಪರಿಚಯ
- ಕಲ್ಲಿನಂತಹ ಕಲ್ಲು
- ಮಹಿಳಾ ಸಾಹಿತ್ಯ ಪರಂಪರೆ, ಆಧುನಿಕತೆ ಮತ್ತು ಸದ್ಗುಣಿ ಕೃಷ್ಣಾಬಾಯಿ
- ಮುಸ್ಸಂಜೆಯ ಕಥಾ ಪ್ರಸಂಗ - ಒಂದು ಅನಿಸಿಕೆ

**ಮಾನಸ** ತಿಂಗಳ ಪತ್ರಿಕೆ ಡಿಸಂಬರ್ 2005

ಸಂಪುಟ : 20 ಸಂಚಿಕೆ : 11



**ವಿಳಾಸ :**

"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

**ಸೂಚನೆ :**

| | |
|---|---|
| ಬಿಡಿಪ್ರತಿ | 10-00 ರೂ. |
| ವಾರ್ಷಿಕ ಚಂದಾ | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |

## ಈ ಸಂಚಿಕೆಯಲ್ಲಿ.....



**ಮೈಸೂರು**

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಅಮೃತ ಪ್ರೀತಂ - ಸಾಹಿತ್ಯದಲ್ಲಿ ಮಡಿವಂತಿಕೆಯ ಬಗ್ಗೆ ಸಿಡಿದು ನಿಂತವರಷ್ಟೇ ಅಲ್ಲ, ಬದುಕಿನಲ್ಲಿ ಕೂಡಾ. ವೈವಾಹಿಕ ಚೌಕಟ್ಟಿನ ಆಚೆ ಬದುಕನ್ನು ಅರಸಿ ಹೊರಟ ಈ ಸುಂದರಿಯ ಬದುಕಿನ ವೈರುದ್ಯಗಳು ಹಲವಾರಿದ್ದರೂ, ಈಕೆಯ ಬದುಕು - ಬರಹ ಎಲ್ಲರನ್ನು ಅವರತ್ತ ಆಕರ್ಷಿಸುವಷ್ಟು, ಗಮನಿಸುವಷ್ಟು ಪ್ರಬುದ್ಧವಾಗಿತ್ತು ಎಂಬ ಸತ್ಯವನ್ನು ನಾವು ಮರೆಯುವ ಹಾಗಿಲ್ಲ.

'ಪಿಂಜಾರ' ಅಮೃತರವರ ಕಾದಂಬರಿ. 'ಪೋಸ್ಟಲ್ ಸ್ಟ್ಯಾಂಪ್' ಈಕೆಯ ಜೀವನ ಗಾಥೆ. ಪಂಜಾಬಿ ಸಾಹಿತ್ಯಕ್ಕಾಗಿ ಅಮೃತ ಕೇಂದ್ರ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ. 21 ನೆಯ ಶತಮಾನದ ಹೊಸ್ತಿಲಲ್ಲಿ ಕೂಡಾ ಮಹಿಳೆಯ ಲೈಂಗಿಕ ಸ್ವಾತಂತ್ರ್ಯದ ಬಗ್ಗೆ ಮಾತನಾಡಿದರೆ ನ್ಯಾಯಾಲಯದ ಕಟ್ಟೆ ಹತ್ತ ಬೇಕಾದ ಸಂದರ್ಭಗಳು ನಮ್ಮ ಸುತ್ತ - ಮುತ್ತ ಕಾಣುತ್ತಿರುವಾಗ, ಮಹಿಳೆಯ ಲೈಂಗಿಕ ಪಾವಿತ್ರ್ಯತೆಯನ್ನು ಸಾಂಸ್ಕೃತೀಕರಣಗೊಳಿಸುವ ಹುನ್ನಾರ ನಡೆಯುತ್ತಿರುವಾಗ, ನಲವತ್ತು ವರ್ಷಗಳ ಹಿಂದೆಯೇ ಅಮೃತ ಪ್ರೀತಂ-ಇಂತಹ ವಿಚಾರಗಳನ್ನು ಮುಕ್ತವಾಗಿ ಬರೆದುದೂ ಅಲ್ಲದೇ, ಬದುಕಿದ್ದರೂ ಕೂಡಾ ಎನ್ನುವುದು ಆಕೆಯ ವ್ಯಕ್ತಿತ್ವದ ಒಳಗಿರುವ ವಿರೋಧದ ಧ್ವನಿಯನ್ನು ಗುರುತಿಸುವಂತೆ ಮಾಡುತ್ತದೆ.

ನಿರ್ಭಿಡೆಯಿಂದ ಪದ್ಯಗಳನ್ನು ಬರೆಯುತ್ತಿದ್ದ ಅಮೃತ ಸಿಖ್ ಜನಾಂಗವನ್ನಷ್ಟೇ ಅಲ್ಲ ಇತರರನ್ನೂ ಕೂಡಾ ಬೆಚ್ಚಿ ಬೀಳುವಂತೆ ಮಾಡಿದ್ದಳು. ಹಾಗೇ ತನ್ನ ಅಂತರಂಗಕ್ಕೆ ಒಪ್ಪುವಂತೆ ಬದುಕಿ ವಿವಾದಾತ್ಮಕ ಕೂಡಾ ಆಗಿದ್ದರು.

ಅಮೃತ ನಮ್ಮನ್ನಗಲಿದ್ದಾರೆ. ಮಹಿಳೆಯರ ವಿಮೋಚನೆ, ಸ್ವಾತಂತ್ರ್ಯಕ್ಕೆ ಒಂದು ಮೈಲಿಗಲ್ಲಾಗಿದ್ದ ಈ ಲೇಖಕಿಯ ಹಾದಿ ಇತರರ ಬದುಕಿನಲ್ಲಿ ಭರವಸೆಯಾಗಲಿ. ವಿಮರ್ಶಾ ಲೋಕವನ್ನು ತಮ್ಮತ್ತ ಗಮನ ಕೊಡುವಂತೆ ಒತ್ತಾಯಿಸಿದ ಈ ಲೇಖಕಿಯ ಬರಹ ಇನ್ನಷ್ಟು ಮಂದಿ ಮಹಿಳೆಯರಿಗೆ ಸ್ಫೂರ್ತಿಯಾಗಲಿ.

# 'ಸಾರಾ ಜೋಸೆಫ್' - ಜಾತಿ - ಧರ್ಮದ ಬಗ್ಗೆ

**(ಸಾರಾ ಜೋಸೆಫ್ ಲೇಖಕಿ ಹಾಗೂ ಮಹಿಳಾ ಕಾರ್ಯಕರ್ತೆ. ಸಂಘಟನೆಯ ಬಗ್ಗೆ, ಬರಹಗಳ ಬಗ್ಗೆ, ಧರ್ಮದ ಬಗ್ಗೆ ಅವರ ನಿಲುವುಗಳನ್ನು ಈವರೆಗೆ ಪ್ರಕಟಿಸಿದ್ದೇವೆ. ಕೊನೆಯದಾಗಿ ಜಾತಿ - ಧರ್ಮದ ಬಗೆಗಿನ ಅವರ ಅಭಿಪ್ರಾಯಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.)**

ಸಾರಾರವರ ಪ್ರಕಾರ ಜಾತಿ ಪದ್ಧತಿಯು ಹಿಂದೂವಾದದಿಂದ ಹಾಗೂ ಹಿಂದುತ್ವದಿಂದ ಭಿನ್ನವಾಗಿದೆ. ಹಿಂದುತ್ವ ಎನ್ನುವುದು ಅಸ್ತಿತ್ವದಲ್ಲಿ ಇರದ ಕಲ್ಪನೆ. ರಾಜಕೀಯ ಅಧಿಕಾರಕ್ಕೋಸ್ಕರ 'ಹಿಂದುತ್ವ'ವನ್ನು ಸೃಷ್ಟಿಸಲು ಪ್ರಯತ್ನ ಪಡುತ್ತಿದ್ದಾರೆ. ಒಮ್ಮೆ ಸಾರಾ ಹೇಳಿದ ಮಾತು 'ಭಗವದ್ಗೀತೆಯಲ್ಲಿ ಅಡಿಗೆ ಎಂಬ ಮಾತು ಮನೆಯಲ್ಲಿ ದಲಿತರ ಮಾಂಸವನ್ನು ಬೇಯಿಸಲಾಗುತ್ತದೆ' - ಎಲ್ಲಾ ಕಡೆ ವಿವಾದ ಹುಟ್ಟಿಸಿತ್ತು. ಇದು ಮೇಲ್ವರ್ಗದವರ ಕುರಿತಾದ ಟೀಕೆ ಅಲ್ಲವೆನ್ನುತ್ತಾರೆ ಸಾರಾ. ಎಲ್ಲಾ ಕ್ರಿಶ್ಚಿಯನ್, ಎಲ್ಲಾ ಮುಸ್ಲಿಂ ಹೇಗೆ ಮೂಲಭೂತವಾದಿಗಳಲ್ಲವೋ ಹಾಗೆಯೇ ಎಲ್ಲಾ ಹಿಂದೂಗಳೂ ಮೂಲಭೂತವಾದಿಗಳಲ್ಲ. ಕೆಲವರು ತಮ್ಮ ರಾಜಕೀಯ ಅಧಿಕಾರಕ್ಕೋಸ್ಕರ ಒಂದು ಜೀವನ ಕ್ರಮವನ್ನು - ಧಾರ್ಮಿಕ ಬಣ್ಣದ ಹಿನ್ನಲೆಯಲ್ಲಿ ಎತ್ತಿ ಹಿಡಿಯುತ್ತಾರೆ. ಇದು ಹಿಂದುತ್ವ. ಇಂಡಿಯಾದಲ್ಲಿಯೇ ಹುಟ್ಟಿ, ಬೆಳೆದ ತಾವು ವೇದ, ಪುರಾಣಗಳನ್ನೆಲ್ಲ ಅಂತರೀಕರಿಸಿಕೊಂಡಿರುವ ಬಗ್ಗೆ ಹೇಳುವ ಸಾರಾ - ತಾವು ಮೇಲಿನ ಹೇಳಿಕೆ ಬರೆದುದು ಹಿಂದುತ್ವದಂತಹ ಮೂಲಭೂತವಾದದ ವಿರುದ್ಧವೇ ಹೊರತು ಮೇಲ್‌ಜಾತಿಯ ವಿರುದ್ಧವಲ್ಲ ಎನ್ನುತ್ತಾರೆ. ಇಲ್ಲಿರುವ ಪ್ರಶ್ನೆ ಎಂದರೆ ಬ್ರಾಹ್ಮಣ ಮೂಲಭೂತವಾದ ಮತ್ತು ಬ್ರಾಹ್ಮಣರು ಹಿಂದುತ್ವಕ್ಕೆ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆಯೇ ಎಂಬುದು.

ಕೇರಳಕ್ಕೆ ಭಿನ್ನವಾದ ಇತಿಹಾಸ ಇದೆ ಎಂಬುದನ್ನು ಸಾರಾರವರು ಒಪ್ಪುತ್ತಾರೆ. ಬಂಗಾಲ್, ಬಿಹಾರ್, ಆಂಧ್ರ, ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ಜಮೀನ್‌ದಾರರು ಹಾಗೂ ಕೂಲಿಗಳ ಮಧ್ಯೆ ವರ್ಗ ಸಂಘರ್ಷ ನಡೆಯುತ್ತಿದ್ದಾಗ್ಯೂ ಕೂಡಾ, ಕೇರಳದಲ್ಲಿ ರಾಜಕೀಯ ಅಧಿಕಾರದ ಹಸ್ತಾಂತರ ಶಾಂತಿಯುತವಾಗಿ ನಡೆದದ್ದನ್ನು ಅವರು ಗಮನಿಸುತ್ತಾರೆ. ಸಾರಾರವರ ಪ್ರಕಾರ ಕೇರಳದಲ್ಲಿ ಎಲ್ಲಾ ಪ್ರಗತಿಪರ ಚಳುವಳಿಗಳಲ್ಲಿ ಮೇಲ್ವರ್ಗದವರೂ ಸಹ ಕೆಳ ವರ್ಗದವರ ಜೊತೆ, ಹೆಂಗಸರು, ಬಡವರ ಜೊತೆ ಜೊತೆಯಾಗಿ ಹೋರಾಡಿದ್ದಾರೆ. ಕೇರಳದ ಇತಿಹಾಸದಲ್ಲಿ ನಂಬೂದರಿ ಪಂಗಡ ಜಾತಿಯ ಚಿಹ್ನೆಗಳನ್ನು ಅಳಿಸಿ ಹಾಕಿ - ಮನುಷ್ಯನಾಗಿ ಬದಲಾದ ಉದಾಃಹರಣೆಗಳಿವೆ. ತಮ್ಮ ಉದ್ದ ಕೂದಲು ಕತ್ತರಿಸಿದುದು, ಪವಿತ್ರವೆನ್ನುವ ಜನಿವಾರ ತೆಗೆದು ಹಾಕಿದುದು, ತಮ್ಮ ಹೆಂಗಸರ ಮುಖಗಳನ್ನು ಮುಚ್ಚುತ್ತಿದ್ದ ಕೊಡೆಗಳನ್ನು ಮುರಿದು ಹಾಕಿದುದು, ಕೆಳವರ್ಗದವರ ಜೊತೆ ಸಮೂಹ ಊಟ ಏರ್ಪಡಿಸುತ್ತಿದ್ದುದು - ಈ ಮೂಲಕ ಅವರು ಜಾತಿಯ ಕಟ್ಟು - ಪಾಡು ಮೀರಿ ಮನುಷ್ಯರಾಗಲು ಪ್ರಯತ್ನಿಸಿದುದು ಕೇರಳದ ಸಂಪ್ರದಾಯ ಇತಿಹಾಸ ಎಂದು ಸಾರಾರವರು ನುಡಿಯುತ್ತಾರೆ. ಈ ಹಂತದಲ್ಲಿಯೇ ಜಮೀನ್ದಾರರು 'ಉಳುವವನೇ ಹೊಲದೊಡೆಯ' ಎಂಬ ವಿಚಾರಧಾರೆ, ಕಾನೂನಿನ ಹಿನ್ನಲೆಯಲ್ಲಿ ಯಾವುದೇ ರಕ್ತಧಾರೆಯಿಲ್ಲದೇ ತಮ್ಮ ಹೊಲಗದ್ದೆಗಳನ್ನು ಬಿಟ್ಟುಕೊಟ್ಟರು. ಹೀಗೆ ಕೇರಳದ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಸಾರಾ ದಲಿತರ ಶೋಷಣೆ ಬಲಿತ ಜಾತಿಯವರಿಂದ, ಅವರ ಅಧಿಕಾರದಿಂದ, ಧನ-ಸಂಪತ್ತಿನಿಂದ ನಡೆಯುತ್ತಿದೆ ಎನ್ನುತ್ತಾರೆ. ಸಾರಾ ಬ್ರಾಹ್ಮಣರನ್ನು, ಬಿ.ಜೆ.ಪಿ. ಯವರನ್ನು ಮಾತ್ರ ಪ್ರಶ್ನಿಸುತ್ತಾರೆ ಹಾಗೂ ಚೇಡಿಸುತ್ತಾರೆ ಎಂದು ಹೇಳಲಾಗುತ್ತದೆ. ಆದರೆ ಹೀಗೆನ್ನುವವರು ಇವುಗಳ ಬಗ್ಗೆ ತಮ್ಮಲ್ಲಿ ದೀರ್ಘವಾಗಿ ಚರ್ಚಿಸಬೇಕು ಎನ್ನುತ್ತಾರೆ ಸಾರಾ.

ತಾವು 'ಕಿಚನ್' ಬಗ್ಗೆ ಮಾತನಾಡಿದುದು 50 ರ ದಶಕದ 'ಕಿಚನ್' ಬಗ್ಗೆ ಇರಬಹುದು. ನಗರದಲ್ಲಿ ಅಲ್ಲವಾದರೂ ಇಂದೂ ಕೂಡಾ ಹಳ್ಳಿಗಳಲ್ಲಿ ದಲಿತರನ್ನು ದೂವಿರಿಸುವ ಪದ್ಧತಿ ಇದೆಯೆಂದು ಸಾರಾ ನುಡಿಯುತ್ತಾರೆ.

ಧರ್ಮದ ಹಿನ್ನಲೆಯಲ್ಲಿ ಲೇಖಕ / ಲೇಖಕಿಯರನ್ನು ಪ್ರತ್ಯೇಕಿಸುವ ಮನೋಭಾವನೆಯನ್ನು ಸಾರಾ ಒಪ್ಪುವುದಿಲ್ಲ. ತಾವು ಸಿರಿಯನ್ ಕ್ರಿಶ್ಚಿಯನ್ ಎಂದು ಅನೇಕರು ವಾದ ಮಾಡುವುದನ್ನು ಅವರು ಲಕ್ಷಿಸುವುದಿಲ್ಲ. ಭಗವದ್ಗೀತೆ ಬರಿಯ ಹಿಂದೂಗಳ ಪುಸ್ತಕ ಮಾತ್ರವಲ್ಲ, ಅದು ಭಾರತದ ಎಲ್ಲರಿಗೂ ಸೇರಿದ್ದು ಎನ್ನುತ್ತಾರೆ. ಭಾರತದಲ್ಲಿ ಹುಟ್ಟಿದವರು, ಬೆಳೆದವರು ಎಲ್ಲರೂ ಭಾರತೀಯರೇ. ಅವರು ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಆಗಿರಬಹುದು. ಈ ಸಂಸ್ಕೃತಿಯ ಭಾಗವಾಗಿರುವ ಭಗವದ್ಗೀತೆಯ ಬಗ್ಗೆ ಓದುವ, ವ್ಯಾಖ್ಯಾನಿಸುವ, ಟೀಕಿಸುವ ಹಕ್ಕು ಅವರೆಲ್ಲರಿಗೂ ಇದೆ ಎಂದು ಸಾರಾ ನುಡಿಯುತ್ತಾಕೆ. ತಾವು ಭಗವದ್ಗೀತೆಯನ್ನು ಟೀಕಿಸಿದುದಾಗಿ ಲೇಖಕಿ ನುಡಿಯುತ್ತಾರೆ. ಬೈಬಲ್ ಕೂಡಾ ಅಸ್ಪೃಶ್ಯರ ಮೇಲೆ ದಾಳಿ ನಡೆಸಿದೆ. ಬೈಬಲ್ - ಸೂಳೆಯರನ್ನು ಕಲ್ಲಿಂದ ಹೊಡೆದು ಸಾಯಿಸಬೇಕು ! ಎಂದು ಹೇಳುತ್ತದೆ. ನ್ಯೂ ಟೆಸ್ಟಮೆಂಟನಲ್ಲಿ ಸಾಯಿಸಬಾರದು ಎಂದಿದ್ದರೂ ಕೂಡಾ ಋತುವಾಗಿರುವ ಹುಡುಗಿಯನ್ನು ಅಸ್ಪೃಶ್ಯಳು ಎಂದು

ಭಾವಿಸುತ್ತದೆ. ಕುಷ್ಟ ರೋಗಿಗಳನ್ನು ಕಲ್ಲಿನಿಂದ ಹೊಡೆದು ಸಾಯಿಸಲು ಅಥವಾ ಪ್ರತ್ಯೇಕಿಸುವಂತೆ ಹೇಳಲಾಗುತ್ತದೆ. ಅದಾಯ ತೆರಿಗೆ ವಸೂಲಿ ಮಾಡುವವರನ್ನು ಪಾಪಿಗಳು ಎಂದು ಹೇಳಲಾಗುತ್ತದೆ. ಬಡವರು ಚರ್ಚನ್ನು ಪ್ರವೇಶಿಸಬಾರದು ಎನ್ನುತ್ತದೆ. ಬೈಬಲ್ ಅಪ್ರಜ್ಞಾಪೂರ್ವಕವಾಗಿ ಇದೆಲ್ಲವನ್ನೂ ಸಮರ್ಥಿಸುತ್ತದೆ. ಇವುಗಳನ್ನು ಕೂಡಾ ಸಾರಾ ಟೀಕಿಸುತ್ತಾರೆ. ಅವರು ಭಾಗವಾಗಿರುವ ಜೀವನದ, ಸಂಸ್ಕೃತಿಯ ಹಿನ್ನಲೆಯಲ್ಲಿ ಅವರು ಬೈಬಲ್ ಓದಿದ್ದಾರೆ. ವ್ಯಕ್ತಿಯ ಹಕ್ಕಿನ ಪ್ರಜ್ಞೆಯಿಂದ ತಾವು ಭಗವದ್ಗೀತೆಯನ್ನು ಟೀಕಿಸಿದ್ದಾಗಿ ಲೇಖಕಿ ನುಡಿಯುತ್ತಾರೆ. ಇದೇ ಹಕ್ಕಿನ ಪರಿಜ್ಞಾನದಿಂದಲೇ ಬೈಬಲ್‌ನ್ನು ಕೂಡಾ ವಿಶ್ಲೇಷಿಸುವ ಹಾಗೂ ವ್ಯಾಖ್ಯಾನಿಸುವ ಕೆಲಸ ಮಾಡಿದ್ದೇನೆ ಎನ್ನುತ್ತಾರೆ. ಯಾರಾದರೂ ಹಿಂದೂಗಳಿಗೆ ಸೇರಿದ ಪುಸ್ತಕವನ್ನು ಸಿರಿಯನ್ ಕ್ರಿಶ್ಚಿಯನ್ ಟೀಕಿಸಿದ ರೀತಿ ಇದು ಎಂದರೆ ಅದು ತಮ್ಮನ್ನು ಧೃತಿಗೆಡಿಸುವುದಿಲ್ಲ, ಸುಡುವುದಿಲ್ಲ. ಆದರೆ ಇಡೀ ಸಮಾಜದ ರಚನೆಗೆ ಅಪಾಯವನ್ನು ಉಂಟು ಮಾಡುತ್ತದೆ ಎಂದು ಸಾರಾ ನುಡಿಯುತ್ತಾರೆ.

ಸಾರಾರವರಿಗೆ ರಾಜಕೀಯದಲ್ಲಿ ಭಾಗವಹಿಸುವ ಅಥವಾ ಅಧಿಕಾರ ಪಡೆಯುವ ಆಸೆಯಾಗಲಿ ಇಲ್ಲ. ರಾಜಕೀಯದಿಂದ ಹೊರಗುಳಿದರೆ ಅನೇಕ ಒಳ್ಳೆಯ ಕೆಲಸ ಮಾಡುವ ಸಾಧ್ಯತೆಗಳೇ ಹೆಚ್ಚು ಎನ್ನುತ್ತಾರೆ. ಟೀಕಿಸುವ, ವಿಮರ್ಶಿಸುವ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲು ತಮಗೆ ಇಚ್ಛೆ ಇಲ್ಲ ಎನ್ನುತ್ತಾರೆ. ಬರೆಯುವ ತಮ್ಮ ಹಕ್ಕಿಗೆ ಕುಟುಂಬದಿಂದಾಗಲೀ ಅಥವಾ ಧರ್ಮದಿಂದಾಗಲೀ ತಮಗೆ ಅಡತಡೆಗಳು ಬಂದಿಲ್ಲವೆಂದು ಅವರು ಅಭಿಪ್ರಾಯಪಡುತ್ತಾರೆ.

ಈವರೆಗೆ ತಮ್ಮ ಬರಹಗಳ ಬಗ್ಗೆ ತಮ್ಮ ಸಂಗಾತಿಯಿಂದ ಏನೂ ಸಮಸ್ಯೆಗಳೂ ಉದ್ಭವವಾಗಿಲ್ಲ ಎನ್ನುವ ಸಾರಾ ಅದಕ್ಕೆ ಹಲವಾರು ಕಾರಣಗಳನ್ನೂ ಕೊಡುತ್ತಾರೆ. ಬಹುಶಃ ಅವರ ಗಂಡ ಅವರು ಬರೆದುದೆಲ್ಲವನ್ನೂ ಓದದಿರ ಬಹುದು, ಅವರ ಬರವಣಿಗೆಯ ಬಗ್ಗೆ ಗೌರವವಿರಬಹುದು, ಅಥವಾ ಅವರಿಗೆ ವಿಶಾಲವಾದ ದೃಷ್ಟಿಕೋನವಿರಬಹುದು. ಹಾಗಾಗಿ ಸಾರಾರವರ ಬರವಣಿಗೆಯ ಬಗ್ಗೆ ಆತ ಯಾವ ಮಿತಿಗಳನ್ನೂ ಹೇರುವುದಿಲ್ಲ. ಜೊತೆಗೆ ಯಾರೂ ಕೂಡಾ ತಮ್ಮ ಅಧಿಕಾರವನ್ನು ಉಪಯೋಗಿಸಿ ಸಾರಾರವರ ಬರವಣಿಗೆಯನ್ನು ನಿಲ್ಲಿಸಲು ಸಾರಾರವರು ಬಿಡುವುದೂ ಇಲ್ಲ. ಧರ್ಮದ ಕಟ್ಟು ಪಾಡುಗಳಿಗೆ ಅವರು ಹೆಜ್ಜೆ ಹಾಕುವವರಲ್ಲ. ಆದರೆ ಅವರ ಬರಹಗಳಿಂದ ಅವರ ಕುಟುಂಬಕ್ಕೆ ಧಕ್ಕೆಯಾಗುವ ಸಂದರ್ಭಗಳಿವೆ. ಕುಟುಂಬ ನೋವು ಅನುಭವಿಸಿದರೆ ಅವರೂ ಅನುಭವಿಸಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಇವರನ್ನು ಸರಪಳಿಯಿಂದ ಬಿಗಿಯಬಹುದು ಅಥವಾ ಸಮಾಧಿ ಮಾಡಲು ಅವಕಾಶ ನೀಡದಿರಬಹುದು. ಈ ಎಲ್ಲಾ ಸಮಸ್ಯೆಯ ಬಗ್ಗೆಯೂ ಸಾರಾರವರಿಗೆ ಅರಿವಿದೆ.

ಆದರೆ ಸತ್ತ ಮೇಲೆ ನನ್ನ ಶವದ ಸಮಸ್ಯೆ ನನ್ನದಲ್ಲ ಎಂಬುದಾಗಿ ಕೂಡಾ ಸಾರಾ ನುಡಿಯುತ್ತಾರೆ. ಲಾಲೂರ್‌ನಲ್ಲಿ ಎಲೆಕ್ಟ್ರಿಕ್ ಶವಾಗಾರ ಬೇಗನೇ ಪ್ರಾರಂಭವಾದರೆ ಅದು ತಮ್ಮಂಥವರಿಗೆ ಸಹಾಯವಾಗುತ್ತದೆ ಎನ್ನುತ್ತಾರೆ. ಸ್ವಾತಂತ್ರ್ಯ, ಸ್ವಾತಂತ್ರ್ಯದ ಅರ್ಥವನ್ನು ತಿಳಿದು ಕೊಳ್ಳಬೇಕಾದುದು ಮುಖ್ಯ - ಎಂದು ಸಾರಾ ಅಭಿಪ್ರಾಯ ಪಡುತ್ತಾರೆ. ಹೆಂಗಸರು ಮುಕ್ತವಾಗಿ ಬರೆದರೆ ಅದನ್ನು ಆ ಲೇಖಕಿಯ ಅನುಭವಗಳು ಎಂದೇ ನೋಡಲಾಗುತ್ತದೆ ಎಂದೂ ಸಾರಾ ನುಡಿಯುತ್ತಾರೆ.

ಲೇಖಕಿಯರಿಗೆ ಹಲವಾರು ಮಿತಿಗಳಿವೆ. ಏಕೆಂದರೆ ಬೇರೆ ಹೆಂಗಸರ ತರಹ ಇವರೂ ಮದುವೆ, ಮಕ್ಕಳು, ಕುಟುಂಬ ಎಂದು ಸಾಮಾನ್ಯ ಬದುಕಿಗೆ ತಮ್ಮನ್ನು ಒಡ್ಡಿಕೊಳ್ಳಬೇಕು. ಹಾಗಾಗಿ ಲೇಖಕಿಗೆ ಒಂದು ಪ್ರಶ್ನೆ ಸದಾ ಕಾಡುತ್ತದೆ. ತಾನು ಒಳ್ಳೆಯ ಗೃಹಿಣಿ ಆಗಬೇಕೇ ಅಥವಾ ಒಳ್ಳೆಯ ಬರಹಗಾರ್ತಿಯಾಗಬೇಕೆ ? ಒಳ್ಳೆಯ ಬರಹಗಾರ್ತಿಯಾಗಲು ಪ್ರಯತ್ನಿಸಿದರೆ ಒಳ್ಳೆಯ ಕುಟುಂಬದ ವ್ಯಕ್ತಿಯಾಗುವುದು ಕಷ್ಟವಾಗುತ್ತದೆ. ಕುಟುಂಬದೊಳಗಿನ ಒತ್ತಡಗಳು ಎಲ್ಲರಿಗೂ ತಿಳಿದಿದೆ. ಕುಟುಂಬವನ್ನು ಒಗ್ಗೂಡಿಸಿ ಹಿಡಿದುಕೊಳ್ಳಬೇಕಾಗುತ್ತದೆ. ಕುಟುಂಬ ಒಗ್ಗೂಡಿಸಿ ಹಿಡಿಯುವವರಿಗೆಲ್ಲ ಬರಹ ಸಾಧ್ಯ ಎಂದು ಹೇಳಲಾಗುವುದಿಲ್ಲ. ಸೃಜನಶೀಲ ಬರಹ ಕೆಲವರಿಗೆ ಮಾತ್ರ ಸಾಧ್ಯ. ಲೇಖಕಿ ಬರೀ ಮುಸುರೆ ತಿಕ್ಕುವುದು, ಕಸ ಹೊಡೆಯುವುದು, ಮಕ್ಕಳನ್ನು ನೋಡಿಕೊಳ್ಳುವುದನ್ನೇ ಮಾಡುತ್ತಿದ್ದರೆ ಆಕೆಗೆ ಖಂಡಿತಾ ಅದು ಸಮಸ್ಯೆಯೇ. ಹೀಗೆ ಲೇಖಕಿಯಾದವಳು ಸಮಸ್ಯೆಗಳನ್ನು ಎದುರಿಸುತ್ತಲೇ ಇರುತ್ತಾಳೆ. ಆಕೆಗೆ ಬೇಕೆನಿಸಿದ ಕಡೆ ಪ್ರಯಾಣ ಮಾಡಲಾಗುವುದಿಲ್ಲ. ಹಾಗಾಗಿ ಅನುಭವದ ಕೊರತೆ ಲೇಖಕಿಯರನ್ನು ಕಾಡುತ್ತಲೇ ಇರುತ್ತದೆ. ಸಾರಾರವರೇ ವಿದೇಶಕ್ಕೆ ಹಾಗೂ ಹಲವಾರು ಸ್ಥಳಗಳಿಗೆ ಹೊರಡಬಹುದಿತ್ತು. ಹೋಗಲಿಕ್ಕೆ ಅವರಿಗೆ ಇಷ್ಟ ಕೂಡಾ. ಆದರೆ ಹೋಗಲು ಸಾಧ್ಯವಾಗದು. ಏಕೆಂದರೆ ಕುಟುಂಬದ ಒತ್ತಡಗಳು ಅವರನ್ನು ಅಷ್ಟರಮಟ್ಟಿಗೆ ಬಂಧಿಸಿಬಿಟ್ಟಿರುತ್ತವೆ. ಒಂದು ಸ್ಥಳದಲ್ಲಿ ಪೂರ್ಣ ಸ್ವತಂತ್ರರಾಗಿ ಕುಳಿತುಕೊಳ್ಳುವುದೂ ಕೂಡಾ ಲೇಖಕಿಯರಿಗೆ ಸಾಧ್ಯವಾಗುವುದಿಲ್ಲ. ಬೇರೆ ದೇಶಕ್ಕೆ ಹೋಗುವುದಿರಲಿ, ಬೆಳಗುತ್ತಿರುವ ಚಂದ್ರನನ್ನು ಹೊಲಗದ್ದೆಗಳಲ್ಲಿ ಕುಳಿತು ನೋಡುತ್ತಾ ಕೂರುವುದಕ್ಕೂ ಸಾಧ್ಯವಾಗದಂತಹ ಸನ್ನಿವೇಶವಿದೆ ಎಂದು ಸಾರಾ ಅಭಿಪ್ರಾಯ ಪಡುತ್ತಾರೆ. ನೈತಿಕ ಹಿನ್ನೆಲೆಯಲ್ಲಿ ಮಹಿಳೆಯರ ಮೇಲೆ ನಾನಾ ರೀತಿಯ ಒತ್ತಡಗಳನ್ನು ಹೇರಲಾಗುತ್ತಿದೆ ಹೀಗೆ ಲೇಖಕಿಯರು ಕಳೆದುಕೊಳ್ಳುತ್ತಲೇ

ಇರುತ್ತಾರೆ. ಅದು ಅವರ ಸೂಕ್ಷ್ಮತೆಯ ಮೇಲೆ ಪ್ರಭಾವ ಬೀರುತ್ತದೆ. ಮಹಿಳೆಯರ ಅನುಭವಗಳು ಶೋಷಣಾತ್ಮಕವಾದವುಗಳಾಗಿರುತ್ತವೆ. ಈ ಜಗತ್ತಿನಲ್ಲಿ ಅನೇಕ ಸಂಕೀರ್ಣತೆಗಳಿವೆ, ಅನೇಕ ದೃಶ್ಯಗಳಿವೆ, ಅನೇಕ ಅನುಭವಗಳಿವೆ. ಆದರೆ ಅವುಗಳನ್ನೆಲ್ಲ ನಾವು ಕಳೆದುಕೊಂಡಿದ್ದೇವೆ ಎಂದು ಸಾರಾ ಅಭಿಪ್ರಾಯಪಡುತ್ತಾರೆ.

ಹಾಗಾಗಿ ಬೆಳಗಾಗುವುದನ್ನು, ದನ ಮೇಯುವುದನ್ನೂ ಕೂಡಾ ನಾವು ಪುಸ್ತಕದಲ್ಲಿಯೇ ಓದಬೇಕಾಗುತ್ತದೆ ಎಂದು ಸಾರಾ ಅಭಿಪ್ರಾಯ ಪಡುತ್ತಾರೆ. ಯಾವುದೇ ಕ್ಷೇತ್ರದಲ್ಲಿಯೂ ಬರಹಗಾರ್ತಿಯರ ಮಿತಿ ಎಂದರೆ ಅನುಭವ. ಅಷ್ಟೇ ಅಲ್ಲ, ಕಲಿಸುವಾಗ ಕೂಡಾ ಅದು ಸಮಸ್ಯೆಯೇ. ಗಂಡನು-ಮಹಿಳೆಗಿಂತ ಒಳ್ಳೆಯ ಶಿಕ್ಷಕ ಎಂದು ಹೇಳಲಾಗುತ್ತದೆ. ಮಹಿಳೆ-ಮನೆಯಲ್ಲಿ ಭಾರೀ ಪ್ರಮಾಣ ದೈಹಿಕ ಶ್ರಮ ಹಾಕಿದ ಮೇಲೆಯೇ ಆಕೆ ತನ್ನ ಉದ್ಯೋಗಕ್ಕೆ ಗಮನ ನೀಡುವುದು. ಆದರೆ ಇದನ್ನು ಗಮನಿಸುವ ತಾಳ್ಮೆ ಯಾರಿಗೂ ಇಲ್ಲ. ಪುರುಷ ತಾನು ಆಯ್ಕೆ ಮಾಡಿಕೊಂಡ ಕೆಲಸದಲ್ಲಿ ತಜ್ಞನಾಗಲು ಹಗಲಿರುಳು ದುಡಿಯುವುದಕ್ಕೂ, ಮಹಿಳೆ ದುಡಿಯುವುದಕ್ಕೂ ವ್ಯತ್ಯಾಸವಿದೆ. ಆಕೆ ತಜ್ಞೆಯಾಗಲು ಇಷ್ಟ ಪಟ್ಟರೂ ಆಕೆಗೆ ವಹಿಸಲ್ಪಟ್ಟ ಅನೇಕ ಕೆಲಸಗಳಿಂದಾಗಿ ಆಕೆ ಅಂಗಹೀನಳಾಗಿರುತ್ತಾಳೆ. ಅತ್ಯಂತ ಸ್ವತಂತ್ರ್ಯವಾಗಿರುವ ಮನಸ್ಸನ್ನು ಹೊಂದಿರುವ ಮಹಿಳೆಯರು ಇದರಿಂದಾಗಿ ಘರ್ಷಣೆಗೆ ಒಳಗಾಗುತ್ತಲೇ ಇರುತ್ತಾರೆ.

ಇತ್ತೀಚಿನ ದಿನಗಳಲ್ಲಿ ತಮಗೆ ಕಾರ್ಯಕರ್ತೆಯ ಮನಸ್ಸು ಉಳಿದಿಲ್ಲ ಎಂದು ಸಾರಾ ಹೇಳುತ್ತಾರೆ. ಯಾವುದೋ ಡಿಪ್ರೆಶನ್ ತಮ್ಮ ಮನಸ್ಸನ್ನು ಆವರಿಸಿದೆ ಎನ್ನುತ್ತಾರೆ. ಈಗಿನ ಹುಡುಗಿಯರು ಐದು ವರ್ಷದ ಹಿಂದೆ ಯೋಚಿಸುವ ಹಾಗೆ ಯೋಚಿಸುತ್ತಿಲ್ಲ. ಹುಡುಗರೂ ಬದಲಾಗಿದ್ದಾರೆ. ಬದಲಾದ ಹುಡುಗಿಯರು ಹುಡುಗರಲ್ಲಿ ಸಂಗಾತಿಯನ್ನು ಬಯಸುತ್ತಾರೆ. ಹಾಗಾಗಿ ಹುಡುಗರು ಹಿಂದಿನ ರೀತಿ ಹುಡುಗಿಯರನ್ನು ಹದ್ದು-ಬಸ್ತಿನಲ್ಲಿ ಇಟ್ಟುಕೊಂಡು ಸವಾರಿ ಮಾಡುವುದು ಸಾಧ್ಯವಿಲ್ಲ. ಹಾಗಾಗಿ ಹುಡುಗರು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.. ಕೊನೆಯವರೆಗೆ ಸಾರಾ ಲೇಖಕಿಯಾಗಿ ಉಳಿಯುತ್ತಾರೋ, ಸ್ತ್ರೀವಾದಿಯಾಗಿ ಉಳಿಯುತ್ತಾರೋ ಎಂಬ ಪ್ರಶ್ನೆಗೆ ಸಾರಾ ಇವೆರೆಡೂ ಭಿನ್ನ ಆಯಾಮ ಹೊಂದಿವೆ ಎಂದು ಅಭಿಪ್ರಾಯ ಪಡುತ್ತಾರೆ. ಸ್ತ್ರೀವಾದ ರಾಜಕೀಯ ಆಯಾಮ ಹೊಂದಿದೆ, ಲೇಖಕಿ ಎಂದರೆ ಲೇಖಕಿ ಅಷ್ಟೇ ಎನ್ನುವ ಸಾರಾ ತಾವು ಲೇಖಕಿಯಾಗಿ ಗುರುತಿಸಲ್ಪಡುವುದನ್ನೇ ಇಷ್ಟ ಪಡುತ್ತೇನೆ ಎನ್ನುತ್ತಾರೆ.

**ಸಂದರ್ಶನ : ಗೀತಾ ಹರಿ ಹರನ್,**

From - Just Between Us

# ‘ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರನ್ನು ತಪ್ಪಿಸುವ ಕಾಯಿದೆ - 2005’

ಇನ್ನು ಅನ್ಯಾಯ ಅಸಮಾನತೆಯನ್ನು ಸಹಿಸುವ ಶಕ್ತಿ ಇಲ್ಲ, ಅವುಗಳ ವಿರುದ್ಧ ಹೋರಾಡುವ ಶಕ್ತಿಯೊಂದೇ ನಮಗಿದೆ. ಮಹಿಳಾ ಸಬಲೀಕರಣ ಸಂಕೇತವಾಗಿರುವ ಈ ವಾಕ್ಯವು ಸೆಪ್ಟೆಂಬರ್ 14, 2005 ರಂದು ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರನ್ನು ರಕ್ಷಿಸುವ ಕಾಯದೆ. ಇದು ಕೇವಲ ಕಾಯಿದೆ ಮಾತ್ರವಲ್ಲ ಮಹಿಳೆಯರ ಪ್ರಬಲ ಅಸ್ತ್ರವಾಗಿದೆ.

ಕಾನೂನಿನ ಚೌಕಟ್ಟಿನಲ್ಲಿ ಇದುವರೆಗೂ ಕೌಟುಂಬಿಕ ದೌರ್ಜನ್ಯಕ್ಕೆ ಸೀಮಿತವಾಗಿರುವ ಕಾಯಿದೆಗಳು ಕೆಲವು ಮಾತು. ಅವು ಮದುವೆಗೆ ಸಂಬಂಧಿಸಿದವು ಮತ್ತು ವಿವಾಹ ವಿಚ್ಛೇದನಕ್ಕೆ ಸಂಬಂಧಿಸಿದವುಗಳಾಗಿರತ್ತವೆ. ಮದುವೆ ಮತ್ತು ವಿಚ್ಛೇದನ ಈ ನಡುವಿನ ಅಂತರದಲ್ಲಿ ಮಹಿಳೆಯು ಅನೇಕ ಶೋಷಣೆಗೆ ಒಳಗಾಗಿರುತ್ತಾಳೆ. ಅವುಗಳಿಂದ ಪಾರಾಗಲು ಯಾವ ಸೂಕ್ತ ಕಾಯಿದೆಗಳು ಇಲ್ಲ. ನಾವು ಭಾರತ ದಂಡ ಸಂಹಿತೆ ಪ್ರಕ್ರಿಯೆ (IPC) ಅನುಚ್ಛೇದ 498ನ್ನು ಗಮನಿಸಿದಾಗ ಅದು ತುಂಬ ಕಿರಿದಾದ ಅವಕಾಶವನ್ನು ಒದಗಿಸುತ್ತದೆ. ಇದು ವರದಕ್ಷಣೆ ಶೋಷನೆಗೆ ಮಾತ್ರ ಸೀಮೀತವಾಗಿದೆ. ಬೇರೆ ಎಷ್ಟೋ ಕಾಯಿದೆಗಳು ಮಹಿಳೆಯರ ರಕ್ಷಣೆಗೆ ಇವೆ. ಆದರೆ ಕುಟುಂಬದ ಕಾಯಿದೆಗಳ ಕೊರತೆ ನಮಗೆ ಇದೆ. ಈ ಕಾಯಿದೆಯು ಈ ಕೊರತೆಯನ್ನು ನಿವಾರಿಸುವ ಸಾಧ್ಯತೆ ಇದೆ. ಇದು ಕೇವಲ ಮದುವೆಯಾದ ಮಹಿಳೆಯರನ್ನು ಮಾತ್ರವಲ್ಲದೇ ಮದುವೆಯಾಗದ ಮಹಿಳೆಯರನ್ನೂ ಒಳಗೊಂಡಿದೆ.

ಈ ಕಾಯಿದೆಯ ವ್ಯಾಪ್ತಿಯು ತುಂಬ ವಿಸ್ತಾರವಾಗಿದೆ. ಇದರ ವಿಶೇಷತೆ ಏನೆಂದರೆ. ‘ಕೌಟುಂಬಿಕ ಸಂಬಂಧ’ ಮತ್ತು ‘ಪಾಲುದಾರರ ಕುಟುಂಬದ’ ವ್ಯಾಖ್ಯಾನವನ್ನು ತುಂಬ ಸೂಕ್ಷ್ಮವಾಗಿ ವಿವರಿಸುತ್ತದೆ. ಕೌಟುಂಬಿಕ ಸಂಬಂಧದಲ್ಲಿ ಇಬ್ಬರು ವ್ಯಕ್ತಿಗಳ ಸಂಬಂಧವು ರಕ್ತದಿಂದ, ವೈವಾಹಿಕತನದಿಂದ, ದತ್ತಕದಿಂದ, ಅವಿಭಕ್ತ ಕುಟುಂಬದಂತೆ ಜೊತೆಗೆ ವಾಸಿಸುವುದರಿಂದ ಮುಖ್ಯವಾಗಿ ಜೊತೆಗೆ ಕೂಡಿ ಬಾಳುವುದರಿಂದ ಅಥವಾ ಜೊತೆಗೆ ಕೂಡಿ ಬಾಳಿದ್ದರೆ ಅಂತಹ ಎಲ್ಲ ಸಂಬಂಧಗಳು ಕೌಟುಂಬಿಕ ಸಂಬಂಧದ ವ್ಯಾಖ್ಯಾನದಲ್ಲಿ ಬರುತ್ತದೆ.

'ಪಾಲುದಾರ ಕುಟುಂಬ' ಎಂಬ ವ್ಯಾಖ್ಯಾನದಲ್ಲಿ ಮದುವೆಯಾದ ಮತ್ತು ಮದುವೆಯಾಗದ' ಒಟ್ಟಾರೆ ಆಸ್ತಿಯ ಪಾಲಿನಲ್ಲಿ ಅರ್ಹರಾದವರು ಎಂದು ಅರ್ಥ. ಅತ್ತೆ , ಮಾವ, ನಾದಿನಿ, ಮೈದುನ, ಅಣ್ಣ, ತಮ್ಮ, ತಂಗಿ, ಅತ್ತಿಗೆ ಅಕ್ಕ ಅಪ್ಪ ಅಮ್ಮ ಇತ್ಯಾದಿ ಸಂಬಂಧಗಳನ್ನು ಗುರುತಿಸುವುದು ಮನೆಯಲ್ಲಿ ಪಾಲುದಾರರು ಎಂದು ಅರ್ಥೈಸುತ್ತದೆ.

ಅನುಚ್ಛೇದ ಮೂರರಲ್ಲಿ 'ಕೌಟುಂಬಿಕ ದೌರ್ಜನ್ಯದ' ಅಂಶವು ತುಂಬ ವಿಸ್ತಾರವಾದ ವ್ಯಾಖ್ಯಾನವನ್ನ ಹೊಂದಿದೆ. ವಿಶೇಷವಾಗಿ ದೈಹಿಕ, ಲೈಂಗಿಕ, ಬಾಯಿ ಮಾತಿನ ಮತ್ತು ಉದ್ವೇಗದ ದೂಷಣೆಗಳನ್ನು ಒಳಗೊಂಡಿದೆ.

ದೈಹಿಕ ದೂಷಣೆ-ದೇಹಕ್ಕೆ ಅಪಾಯವಾಗುವಂತಹ, ದೇಹವನ್ನು ಹಾನಿ ಮತ್ತು ಗಾಯ ಪಡಿಸುವ ದೇಹಕ್ಕೆ ದಕ್ಕೆಯನ್ನುಂಟು ಮಾಡುವ ಅಥವಾ ದೇಹಕ್ಕೆ ಹಾನಿ ಮಾಡಿಕೊಳ್ಳಲು ಪ್ರಚೋದಿಸುವ ಯಾವುದೇ ಬೆದರಿಕೆ, ದಾಳಿ, ನಡುವಳಿಕೆ, ಮಾತು ಕ್ರಿಯೆಗಳು ಎಂದರ್ಥ.

ಲೈಂಗಿಕ ದೂಷಣೆ - ಕೆಟ್ಟ ಮಾತುಗಳಿಂದ ಬೈಯುವುದು ಅಸಭ್ಯ ರೀತಿಯಲ್ಲಿ ನಡೆದು ಕೊಳ್ಳುವುದು ಲೈಂಗಿಕ ಕಿರುಕುಳ ನೀಡುವುದು, ಅಪಮಾನ ಪಡಿಸುವುದು, ಅಶ್ಲೀಲ ಕ್ರಿಯೆಗಳಿಗೆ ಪ್ರಚೋದನೆ ನೀಡುವುದು, ಒಟ್ಟಾರೆ ಮಹಿಳೆಯ ಘನತೆಗೆ ದಕ್ಕೆ ಬರುವಂತಹ ಯಾವುದೇ ನಡುವಳಿಕೆ ಮಾತು ಕ್ರಿಯೆ ಎಂದರ್ಥ.

ಬಾಯಿ ಮಾತಿನ ಮತ್ತು ಉದ್ವೇಗದ ದೂಷಣೆ, ಅವಮಾನ ತಾತ್ಸಾರ ಮಾಡುವುದು, ಅವಾಚ್ಯ ಶಬ್ದಗಳಿಂದ ನಿಂದಿಸುವುದು. ಬೆದರಿಕೆ ಹಾಕುವುದು ಅಡ್ಡ ಹೆಸರಿನಿಂದ ಕರೆಯುವುದು, ಪರಿಹಾಸ್ಯ ಮಾಡುವುದು. ಮಕ್ಕಳಾಗಲಿಲ್ಲವೆಂದು ನಿಂದಿಸುವುದು ಮತ್ತು ಗಂಡು ಮಕ್ಕಳ ಬಯಕೆಗಾಗಿ ಹಿಂಸಿಸುವ ಅವಮಾನ ಪಡಿಸುವ ಎಲ್ಲ ಪ್ರಕ್ರಿಯೆಗಳು ಎಂದು ಅರ್ಥ.

ಆರ್ಥಿಕ ದೂಷಣೆ : ಆರ್ಥಿಕ ವಿಷಯಕ್ಕೆ ಸಂಬಂಧಿಸಿದ ಸಂಪನ್ಮೂಲಗಳು ಅವು ಪಿತ್ರಾರ್ಜಿತ ಗಳಿಕೆಯಿಂದ, ಹಕ್ಕಿನಿಂದ, ಪಾಲುಗಾರಿಕೆಯಿಂದ, ಸ್ವಗಳಿಕೆಯಿಂದ ಕೊಡುಗೆಯಿಂದ ಸ್ತ್ರೀಧನದಿಂದ ಪೋಷಣೆಯಿಂದ ಬಂದಿರುವ ಯಾವುದೇ ವಸ್ತುಗಳು, ಕಾಗದ ಪತ್ರಗಳು, ಆಭರಣಗಳು, ಚಿರ ಮತ್ತು ಅಚಿರ ಸ್ವತ್ತುಗಳು, ಪೀಠೋಪಕರಣಗಳು, ಪಾತ್ರೆಗಳು ಇತ್ಯಾದಿಗಳನ್ನು ಮಹಿಳೆಯರ ಅನುಮತಿಯಿಲ್ಲದೆ ಮಾರುವಂತಿಲ್ಲ ಮತ್ತು ವಿಲೇವಾರಿ ಮಾಡುವಂತಿಲ್ಲ. ಎಲ್ಲಕ್ಕಿಂತಲೂ ಮುಖ್ಯವಾಗಿ ಮಹಿಳೆಯರನ್ನು ಮತ್ತು ಮಕ್ಕಳನ್ನು ಮನೆಯಿಂದ ಹೊರಗೆ ಹಾಕುವಂತಿಲ್ಲ ಮತ್ತು ಮನೆಯೊಳಕ್ಕೆ ಬಾರದಂತೆ ತಡೆಯುವಂತಿಲ್ಲ ಎಂಬ ಅರ್ಥ.

ವರದಕ್ಷಿಣೆಗಾಗಲಿ ಚಿರ ಮತ್ತು ಅಚಿರಸ್ವತ್ತುಗಳಿಗಾಗಲಿ, ಬೆಲೆ ಬಾಳುವ ವಸ್ತು ಮತ್ತು ಆಭರಣಗಳಿಗಾಗಿ ಮಹಿಳೆಯನ್ನು ಹಿಂಸಿಸುವುದು ಬೆದರಿಸುವುದು ಗಾಯ ಪಡಿಸುವುದು ಮಾಡಬಾರದು. ಹಾಗೆಯೇ ಮಹಿಳೆಯು ತನಗೆ ಆಸಕ್ತಿ ಇರುವ ವ್ಯಕ್ತಿಯನ್ನು ಸಂಪರ್ಕಿಸದಂತೆ ತಡೆಯುವುದು ಅಂತಹ ವ್ಯಕ್ತಿಗೆ ಬೆದರಿಕೆ ಹಾಕುವುದು ಕೂಡ ಅಪರಾಧವಾಗುತ್ತದೆ.

ಈ ರೀತಿ ಮೇಲಿನ ರೀತಿಯ ಘಟನೆಗಳು ಕುಟುಂಬದಲ್ಲಿ ಸಂಭವಿಸಿದಾಗ ಅಥವಾ ಸಂಭವಿಸಬಹುದಾದ ಸಾಧ್ಯತೆಗಳು ಕಂಡು ಬಂದಾಗ ತಕ್ಷಣ ಹತ್ತಿರದ ಕೋರ್ಟುಗಳಲ್ಲಿ ಮೊಕದ್ದಮೆಯನ್ನು ದಾಖಲಿಸಬಹುದು. ಶೋಷಣೆಗೆ ಒಳಗಾದ ವ್ಯಕ್ತಿ ಅಥವಾ ಅವಳ ಪರವಾಗಿ ಯಾರಾದರೂ ಮೊಕದ್ದಮೆಯನ್ನು ದಾಖಲಿಸಬಹುದು. ಇದು ಸಿವಿಲ್ ಕಾಯಿದೆ -ಯಾದ ಕಾರಣ ಪೊಲೀಸ್ ಸ್ಟೇಷನ್ನಿಗೆ ಹೋಗುವ ಅವಶ್ಯಕತೆ ಇರುವುದಿಲ್ಲ. ಪ್ರತಿವಾದಿಯು ಕೋರ್ಟಿನ ಆದೇಶಗಳನ್ನು ಮಿರಿದಾಗೂ ಕ್ರಿಮಿನಲ್ ಕ್ರಮಗಳನ್ನು ಜಾರಿಗೊಳಿಸಲಾಗುತ್ತದೆ. ಈ ಕಾಯಿದೆ ಅಡಿಯಲ್ಲಿ ಬರುವ ಕಾಯಿದೆಗಳನ್ನು ಕೋರ್ಟ್ ಶೀಘ್ರವಾಗಿ ಪರಿಹರಿಸ ತಕ್ಕದ್ದು.

ಪರಿಹಾರ ಆದೇಶಗಳು ಹಣದ ರೂಪದಲ್ಲಿಗಲಾಗಲಿ, ರಕ್ಷಣಾ ಆದೇಶದ ಮೂಲಕವಾಗಲಿ, ಮನೆಯಲ್ಲಿ ಜೀವಿಸುವ ಹಕ್ಕು ನಿರ್ಮಿಸುವುದರ ಮೂಲಕವಾಗಲಿ ನಷ್ಟ ಪರಿಹಾರ ಒದಗಿಸುವುದರ ಮೂಲಕ ಆದೇಶ ಹೊರಡಿಸಬಹುದು. ಈ ಕಾಯಿದೆಯು ತೀರ ಸರಳ ಕೋರ್ಟು ಕ್ರಮಗಳನ್ನು ಒಳಗೊಂಡಿದೆ.

ಈ ಕಾಯಿದೆಯು ಉತ್ತಮ ಕಾಯಿದೆಯಾಗಿದೆ, ಆದರೆ ಇದರ ಜಾರಿ ಮಾತ್ರ ತುಂಬ ಕಠಿಣವಾಗಿದೆ. ಏಕೆಂದರೆ ಪಿತೃಪ್ರಧಾನ ಸಮಾಜದಲ್ಲಿ ಮಹಿಳೆ ಎಷ್ಟರ ಮಟ್ಟಿಗೆ ಕುಟುಂಬದ ಹೊಸ್ತಿಲನ್ನು ದಾಟಿ ತನ್ನ ಮೇಲೆ ಆಗುತ್ತಿರುವ ದೌರ್ಜನ್ಯವನ್ನು ಮೆಟ್ಟನಿಲ್ಲಬಹುದು ? ಇದಕ್ಕೆ ಮಹಿಳೆಯರು ಮಾತ್ರವಲ್ಲ ಇಡೀ ಸಮಾಜವೇ ಶ್ರಮಿಸಬೇಕು. ವರದಕ್ಷಿಣೆ ನಿಷೇಧಕಾಯಿದೆ, ಬಾಲ್ಯ ವಿವಾಹ ನಿಷೇಧ ಕಾಯಿದೆಗಳಂತೆ ಪರಿಣಾಮಕಾರಿ ಕಾರ್ಯ ವೈಫಲ್ಯತೆಯನ್ನು ಕಾಣದಂತೆ ಮಾಡಲು ಮಹಿಳೆಯರು ಎದ್ದು ನಿಲ್ಲಬೇಕು.

ಮಹಿಳೆಯರೇ, ನೀವು ಕೌಟುಂಬಿಕ ದೌರ್ಜನ್ಯದಿಂದ ತಪ್ಪಿಸಿಕೊಳ್ಳಲು ಈ ಕಾಯಿದೆಯೆಂಬ ಅಸ್ತ್ರದಿಂದ ಸಬಲರಾಗುತ್ತೀರೋ ಅಥವಾ ಅನ್ಯಾಯ ಅಶಾಂತಿ, ದೌರ್ಜನ್ಯಗಳನ್ನು ಸಹಿಸಿಕೊಂಡು ಕೊರಗಿ, ಸೊರಗಿ, ನಿರಾಶೆರಾಗಿ ಗುಲಾಮರಂತೆ ಅಬಲರಾಗಿ ಜೀವನ ನಡೆಸುತ್ತೀರೋ ಯೋಚಿಸಿ...........!

ಮನೋರಂಜನಿ
ಪರ್ಯಾಯ ಕಾನೂನು ವೇದಿಕೆ
ಬೆಂಗಳೂರು

# ಲೈವ್‌ಬ್ಯಾಂಡ್ ಹುಡುಗಿಯರ ದುಸ್ತರ ಬದುಕು

**ಗೀತಾ** ಶೆಟ್ಟಿಯ ಧ್ವನಿ ತಾರಕಕ್ಕೇರುತ್ತದೆ. 'ವರ್ಷಾ ಕಾಳೇ ಜಿಂದಾಬಾದ್'. ಗಂಟಲಿನ ಪಸೆ ಬತ್ತುವವರೆಗೆ ಗೀತಾ ಕೂಗುತ್ತಾಳೆ. ವರ್ಷಾ ಕಾಳೇ ಬಾಂಬೆ ಬಾರ್ ಗರ್ಲ್ಸ್ ಯ್ಯೂನಿಯನ್ ಅಧ್ಯಕ್ಷ. ತಮ್ಮ ಸಂಗಾತಿಯೊಬ್ಬಳು ಆತ್ಮಹತ್ಯೆ ಮಾಡಿಕೊಂಡಿದ್ದು ಆಕೆಯ ಶವವನ್ನು ಪಡೆಯಲು ಧರಣಿ ನಡೆಸಿದ್ದರು.

ಪೊಲೀಸ್ ಈಕೆಯನ್ನು ಬಂಧಿಸಿ ಪೊಲೀಸ್ ಠಾಣೆಗೆ ಕರೆದುಕೊಂಡು ಹೋಗಿ ಸಾಯಂಕಾಲ ಬಿಡುಗಡೆ ಮಾಡಿದ್ದರು. ರೈಲು ಹಿಡಿದು ಮನೆಗೆ ಬಂದ ಮೇಲೆ ಆಕೆ ತಾನು ಮಾಡಿದ ಸಾಹಸವನ್ನು ಗಂಡ ಮಕ್ಕಳೆದುರಿಗೆ ಬಿಚ್ಚಿಡುತ್ತಾಳೆ. ಆಕೆಯ ಬಗ್ಗೆ ಅವರಿಗೆಲ್ಲಾ ಹೆಮ್ಮೆಯ ಭಾವನೆ.

ಗೀತಾ ಹದಿನೈದು ವರ್ಷದವಳಾಗಿದ್ದಾಗ ಆಕೆಯ ಚಿಕ್ಕಮ್ಮನೊಂದಿಗೆ ನಾಗಪುರದಿಂದ ಮುಂಬೈಗೆ ಬಂದಳು. ಬಟ್ಟೆಗಿರಣಿಯೊಂದರಲ್ಲಿ ದುಡಿಯುತ್ತಿದ್ದ ಆಕೆ ಆರು ನೂರು ರೂ. ಸಂಬಳ ಪಡೆಯುತ್ತಿದ್ದಳು. ಆಕೆಯ ತಂದೆ ಕ್ಯಾನ್ಸರ್‌ನಿಂದ ನರಳುತ್ತಿದ್ದರು. ತಂದೆಯ ಕಾಯಿಲೆಗಾಗಿ ಗೀತಾ ಹಣವನ್ನು ಕೊಡಿಡುವುದು ಅನಿವಾರ್ಯವಾಗಿತ್ತು. ಒಂದು ಬಾರಿ ಆಕೆಯ ನೆರೆಯವರು 'ನೀನು ಎಷ್ಟು ಸಂಪಾದಿಸುತ್ತೀಯಾ ಎಂದರು ? ಈಕೆ ಆರುನೂರು ರೂ ಎಂದುತ್ತರಿಸಿದಳು'. "ನನ್ನ ಡಾನ್ಸ್ ಬಾರ್‌ಗೆ ಬಾ" ಸಾವಿರಾರು ರೂಪಾಯಿಗಳನ್ನು ಸಂಪಾದಿಸ ಬಹುದೆಂದರು.

ಗೀತಾ ಡಾನ್ಸ್ ಬಾರ್‌ನಲ್ಲಿ ಕೆಲಸಮಾಡತೊಡಗಿದಳು. ಅದು ಬಾಳಾ ಠಾಕ್ರೆಯ (ಈಗ ನಿಧನ ಹೊಂದಿರುವ) ಮಗನದೆಂಬ ಆರೋಪವು ಇತ್ತು. ದಿಢೀರನೆ ಗಳಿಸಿದ ಹಣದ ಮೂಲವನ್ನು ಆಕೆ ತಂದೆ ತಾಯಿಯರಿಗೆ ತಿಳಿಸಲಿಲ್ಲ. ಹದಿನೈದು ವರ್ಷಗಳ ನಂತರವೂ ಆಕೆಯದೇ ಒಂದು ಡ್ಯಾನ್ಸ್ ಟ್ರೂಪ್ ಇದೆಯೆಂದೇ ಅವರು ನಂಬಿದ್ದಾರೆ. ಆದರೆ ಅಂದು ಡ್ಯಾನ್ಸ್ ಬಾರ್‌ಗಳು ಇಂದಿನ ಹಾಗೆ ಇರಲಿಲ್ಲವೆನ್ನುವ ಗೀತಾ ಗಂಡಸರು ತಮ್ಮ ಫೋನ್ ನಂಬರ್‌ಗಳನ್ನು ಕೊಟ್ಟು ಊಟಕ್ಕೆ ಆಹ್ವಾನಿಸುತ್ತಾರೆ. ಇಲ್ಲಿ ಯಾವುದೇ ಕಾನೂನು ಬಾಹಿರ ಚಟುವಟಿಕೆಗಳು ನಡೆಯುವುದಿಲ್ಲ. ಅದೇನಿದ್ದರೂ ಹುಡುಗಿಯರಿಗೆ ಬಿಟ್ಟದ್ದು. ನಮಗೂ, ಬಾರ್ ವ್ಯವಸ್ಥಾಪಕರಿಗೂ, ಕೆಲಸಮಾಡುವ ಇತರರೊಂದಿಗೆ ಯಾವುದೇ ಲೈಂಗಿಕ ಸಂಬಂಧ ಇರುವುದಿಲ್ಲ ಎನ್ನುತ್ತಾಳೆ ಗೀತಾ.

ಆಗಸ್ಟ್ 14 ರಿಂದ ಮುಂಬೈನಲ್ಲಿ ಬಾರ್‌ಗಳನ್ನು ಮುಚ್ಚಲಾಗಿದೆ. ಅಂದಿನಿಂದ ಗೀತಾ ಯೂನಿಯನ್ ಪರವಾಗಿ ಮಾಧ್ಯಮಗಳಿಗೆ ಸಂದರ್ಶನ ನೀಡುತ್ತಿದ್ದಾಳೆ. ಇದರಿಂದ ಬರುವ ಆದಾಯದಿಮದ ಜೀವನ ನೂಕುತ್ತಿದ್ದಾಳೆ. ಎನ್.ಡಿ.ಟಿ.ವಿ ಯವರು, ನಾನು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದಕ್ಕಾಗಿ ಚೆಕ್‌ನ್ನು ಕಳಿಸಿದ್ದರು. ಬ್ಯಾಂಕ್‌ನಲ್ಲಿ ನನ್ನ ಖಾತೆ ಇಲ್ಲ. ಚೆಕ್ ತೆಗೆದುಕೊಂಡು ನಾನೇನು ಮಾಡಲಿ, ಬ್ಯಾಂಕ್‌ನವರು ಖಾತೆ ತೆರೆಯಲು ಕೇಳುವ ದಾಖಲೆಗಳು ನನ್ನ ಬಳಿ ಇಲ್ಲ. ಇನ್ನೊಮ್ಮೆ ನನ್ನ ಸಂದರ್ಶನ ಮಾಡಲು ದೆಹಲಿಯಿಂದ ಬಂದರು. ಆಗ ನಾನು ಕ್ಯಾಶ್‌ನ್ನು ಕೇಳಿ ಪಡೆದೆ. ಕೈಗೆ ಹಣ ಬಂದ ಕೂಡಲೇ ಅಕ್ಕಿ ಬೇಳೆಯನ್ನು ತೆಗೆದು ಕೊಂಡು ಬಂದೆ ಎನ್ನುತ್ತಾಳೆ ಗೀತಾ.

ಗೀತಾ ಅವಳ ಕುಟುಂಬದೊಂದಿಗೆ ಚಿಕ್ಕ ಕೋಣೆಯಲ್ಲಿದ್ದಾಳೆ. ಅವಳ ಗಂಡ ಅಶೋಕ್ ಹಾಗೂ ಅವಳ ಇಬ್ಬರು ಮಕ್ಕಳು ಆ ಕೋಣೆಯಲ್ಲಿ ವಾಸವಾಗಿದ್ದಾರೆ. ಚಿಕ್ಕದೊಂದು ಹಾಸಿಗೆ, ಫ್ರಿಜ್, ಸ್ಟೀಲ್ ಕಪಾಟು. ಗ್ಯಾಸ್ ಸ್ಟೋವ್ ಮನೆಯಲ್ಲಿರುವ ಅವಳ ಆಸ್ತಿ. ಆ ಚಿಕ್ಕ ಮನೆಯಲ್ಲಿ ಅವರು ಕಾನೂನು ಬಾಹಿರವಾಗಿಯೇ ವಾಸಮಾಡುತ್ತಿದ್ದಾರೆ. ಸರ್ಕಾರಿ ಅಧಿಕಾರಿಗಳಿಗಾಗಿ ಇರುವ ಮನೆಯದು. ಸದಾ ಎತ್ತಂಗಡಿ ಮಾಡುವ ಭಯ. ಎರಡು ಸಾವಿರ ಬಾಡಿಗೆ ಕೊಡುತ್ತಾಳೆ. ಮನೆಯೊಳಗೆ ಟಾಯ್ಲೆಟ್ ಇರುವುದರಿಂದ ಎರಡು ಸಾವಿರ ಬಾಡಿಗೆ ಕೊಡ ಬಹುದು ಎನ್ನುತ್ತಾಳೆ. ಅಡುಗೆ ಮಾಡುತ್ತಲೇ ಮಾತನಾಡುವ ಗೀತಾ ವರದಿಗಾರರು ಪೋಟೋ ತೆಗೆದು ಕೊಳ್ಳುವುದನ್ನು ಇಷ್ಟ ಪಡುವುದಿಲ್ಲ. ನಾವು ಮೀನು ತಿನ್ನುತ್ತಿರುವುದನ್ನು ಪತ್ರಿಕೆಯಲ್ಲಿ ಬರೆದರೆ 'ನೋಡಿ ಬಡವರು ಅಂತ ಹೇಳ್ತಾರೆ, ಮೀನು ತಿನ್ನುತ್ತಾರೆ, ಎಂದು ಟೀಕಿಸುತ್ತಾರೆ ಎನ್ನುತ್ತಾಳೆ ಗೀತಾ.

ಹದಿನೇಳು ವರ್ಷದವಳಾಗಿದ್ದಾಗ ಅಶೋಕನನ್ನು ಭೇಟಿಯಾದಳು. ಗಂಡನಿಗೆ ಬಟ್ಟೆ ಹೊಲಿಯುವ ಒಂದು ಅಂಗಡಿ ಇತ್ತು. ಪರಿಚಯವಾಗಿ ಒಂದು ತಿಂಗಳಲ್ಲಿ ಅವರು ಮದುವೆಯಾದರು. ಹದಿನೆಂಟು ವರ್ಷದಲ್ಲಿ ಆಕೆಗೆ ಮಗುವಾಯಿತು. ಆಕೆ ತಾನು ಮಾಡುತ್ತಿದ್ದ ಕೆಲಸವನ್ನು ಬಿಟ್ಟಳು. ಕ್ರಮೇಣ ಗಂಡ ಕುಡಿಯುವುದನ್ನು ಕಲಿತ. ಸದಾ ಹೆಂಡತಿಯನ್ನು ಹೊಡೆಯ ತೊಡಗಿದ. ಗೀತಾಳ ಆರೋಗ್ಯ ಹದಗೆಡುತ್ತಾ ಬಂದಿತು. ಕೊನೆಗೆ ಆಕೆಗೆ ಆಪರೇಶನ್ ಮಾಡಿಸುವುದು ಅನಿವಾರ್ಯವಾಗಿ 70,000/-ರೂ ವೆಚ್ಚವಾಯಿತು. ಗೀತಾ ಅನಿವಾರ್ಯವಾಗಿ ಡ್ಯಾನ್ಸ್‌ಬಾರ್‌ಗೆ ಹೋಗ ತೊಡಗಿದಳು. ದಿನಕ್ಕೆ

8 ಗಂಟೆಗಳ ಕಾಲ ದುಡಿಯುತ್ತಿದ್ದ ಆಕೆ ತಿಂಗಳಿಗೆ 9000/- ರೂ ಸಂಪಾದಿಸ ತೊಡಗಿದಳು. ಮಕ್ಕಳನ್ನು ಅಣ್ಣನ ಮನೆಯಲ್ಲಿ ಬಿಟ್ಟು ಇಂಗ್ಲೀಷ್ ಮಾಧ್ಯಮದಲ್ಲಿ ಓದಿಸ ತೊಡಗಿದಳು. ವಾರಾಂತ್ಯದಲ್ಲಿ ಮಕ್ಕಳಿಗೆ ಬೇಕಾದುದನ್ನು ತೆಗೆದುಕೊಂಡು ಭಾರವಾದ ಹೃದಯದಿಂದ ಅವರನ್ನು ಭೇಟಿಯಾಗುತ್ತಿದ್ದಳು. ತನ್ನ ಈ ಸ್ಥಿತಿಗೆ ತನ್ನನ್ನು, ಗಂಡನನ್ನು ಬೈದು ಕೊಳ್ಳುತ್ತಿದ್ದಳು.

ಬಾರ್ ಮುಚ್ಚಿದ ಮೇಲೆ ಅಣ್ಣ ಮಕ್ಕಳನ್ನು ವಾಪಸ್ಸು ಕಳಿಸಿದ್ದಾನೆ. ಅವರ ವಿದ್ಯಾಭ್ಯಾಸದ ಖರ್ಚು,ವೆಚ್ಚವನ್ನು ಭರಿಸಲು ಆಗುತ್ತಿಲ್ಲ. ಬಾಂಬೆಯಲ್ಲಿ ಸುರಿದ ಮಳೆಯಿಂದಾಗಿ ಗಂಡನ ಟೈಲರಿಂಗ್ ಅಂಗಡಿಯು ನಾಶವಾಯಿತು. ಕೈಯಲ್ಲಿರುವ ಕೆಲಸವನ್ನು ಕಳೆದುಕೊಂಡ ಗೀತಾ ಅತಂತ್ರ ಸ್ಥಿತಿಯನ್ನು ತಲುಪಿದ್ದಾಳೆ. ಏನು ಮಾಡಬೇಕೆಂದು ದಿಕ್ಕು ತೋರದೆ ಸದಾ ಸಾವಿನ ಚಿಂತೆಯಲ್ಲಿರುತ್ತಾಳೆ. ಯೂನಿಯನ್ ಪರವಾಗಿ ಮಾತನಾಡುತ್ತಲೇ, ಒಮ್ಮೆ, ನಾನು ಗಂಡನಿಗೆ ಡೈವೋರ್ಸ್ ಕೊಟ್ಟು ಬಿಡುತ್ತೇನೆ ಎಂದರೆ. ಇನ್ನೊಮ್ಮೆ ಮಕ್ಕಳಿಗೂ ವಿಷ ನೀಡಿ, ನಾನೂ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಪತ್ರಿಕೆಯ ಮುಖ ಪುಟದಲ್ಲಿ ಬರಲಿ ಬಿಡಿ ಎಂದು ನಿಟ್ಟುಸಿರು ಬಿಡುತ್ತಾಳೆ.

* * * * *

**ಲತಾ** ಹನ್ನೊಂದರ ಹಸುಳೆ. ಆ ಚಿಕ್ಕವಯಸ್ಸಿನಲ್ಲಿ ಮೈಮುರಿಯುವ ದುಡಿತ. ಅಡುಗೆ ಮಾಡುವುದು. ಪಾತ್ರೆ ತೊಳೆಯುವುದು, ಮನೆ ಒರೆಸುವುದು ಅವಳ ಪಾಲಿನ ಕೆಲಸ. ಕೇರಳದ ತೆಲಿಚರಿಯೆಂಬ ಹಳ್ಳಿಯಲ್ಲಿ ಹತ್ತು ಜನರ ಕುಟುಂಬದ ಕೆಲಸದ ಹೊರೆ ಅವಳ ಮೇಲಿತ್ತು.. ಆಗೊಮ್ಮೆ ಅವಳ ಹಳ್ಳಿಗೆ ಸರ್ಕಸ್ ಬಂದಿತು. ಲತಾ ಸರ್ಕಸ್‌ಗೆ ಸೇರುವುದಾಗಿ ಹಟ ಹಿಡಿದಳು. ತಂದೆ ತಾಯಿ ಒಪ್ಪಿಗೆ ನೀಡಲಿಲ್ಲ. "ನೀನು ಹೋಗುವುದಾದರೆ ನನ್ನ ಹೆಣದ ಮೇಲೆ" ತಾಯಿಯ ಆಕ್ರೋಶ.

ಲತಾ ತಂದೆ-ತಾಯಿ ಪ್ರೀತಿಯಿಂದ ವಂಚಿತೆ. ಹೆಣ್ಣು ಮಕ್ಕಳನ್ನು ಹುಟ್ಟಿದಾಗಿನಿಂದ ಮದುವೆಯವರೆಗೆ ಒಂದು ಹೊರೆಯಾಗಿಯೇ ಭಾವಿಸುತ್ತಾರೆಂಬ ಅರಿವು ಲತಾಗಿತ್ತು. ಹೆಣ್ಣು ಮಕ್ಕಳ ಮದುವೆಗೆ ಮೂರು ಲಕ್ಷ ವರದಕ್ಷಿಣೆ ಕೊಡುವುದು ಸರ್ವೇ ಸಾಧಾರಣ. ಮನೆಯಲ್ಲಿ ಬಡತನ. ಲತಾ ತಾನು ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಹೆದರಿಸಿದಳು. ಈ ಬೆದರಿಕೆಯಿಂದಾಗಿ ಆಕೆಗೆ ಒಪ್ಪಿಗೆ ನೀಡಿದರು.

ಲತಾ ಸಂಗಿತಗಾರನೊಬ್ಬನನ್ನು ಪ್ರೀತಿಸಿದಳು. ಆತನಿಂದ ಮೋಸ ಹೋದಳು. ಆಕೆಗೆ ಆಗ ಹದಿನೈದು ವರ್ಷವಾಗಿತ್ತು. ಆಕೆಯ ಮಡಿಲಲ್ಲಿ ಒಂದು ಎಳೆ ಮಗುವಿತ್ತು. ಆತ ಆಕೆಯ ಮೇಲೆ ಸೇಡು ತೀರಿಸಿಕೊಳ್ಳುವ ಸಂಚನ್ನು ಹೂಡಿದ್ದ. ಆಕೆಗೆ ಬೇರೆಯವರ ಬೆಂಬಲದ ಅಗತ್ಯವಿತ್ತು. ಆಕೆ ತನ್ನ ಮಗ ಬಬ್ಲುವಿನೊಡನೆ ಪುನಃ ತಾಯಿ ಮನೆಗೆ ವಾಪಸ್ಸು ಬಂದಳು. ಲತಾ ಮನೆ ಬಿಟ್ಟು ಹೋಗಿದ್ದರಿಂದ ಮನೆಗೆಲಸದ ಜವಾಬ್ದಾರಿ ಲತಾಳ ತಂಗಿ ಶಾಲಿನಿಯ ಮೇಲೆ ಬಿದ್ದಿತ್ತು. ಶಾಲಿನಿಯ ಒತ್ತಾಯದಿಂದ ಲತಾ ಹಾಗೂ ಶಾಲಿನಿ ಇಬ್ಬರೂ ಸೇರಿ ಅತ್ತಿಗೆಯ ಒಡವೆಯನ್ನು ಕದ್ದು, ರೈಲು ಟಿಕೆಟ್‌ನ್ನು ಖರೀದಿಸಿ ಮುಂಬೈ ಹಾದಿ ಹಿಡಿದರು.

ಡ್ಯಾನ್ಸ್ ಬಾರ್‌ಗಳಿಗೆ ಹೆಣ್ಣು ಮಕ್ಕಳನ್ನು ಸೇರಿಸುತ್ತಿದ್ದ ಮಹಿಳೆಯೊಬ್ಬಳನ್ನು ಭೇಟಿ ಮಾಡಿ ಅವಳನ್ನು ಅಂಗಲಾಚಿದರು. ಕೆಲವು ದಿನಗಳ ನಂತರ ಆಕೆ ಇಬ್ಬರನ್ನು ಸೇರಿಸಿ ಕೊಂಡರು. ಇವರು ಡ್ಯಾನ್ಸ್ ಬಾರ್‌ನ ಕೆಲಸದಲ್ಲಿ ಮುಳುಗಿದ್ದರೆ, ಆಕೆಯ ಮಗು ಮೇಕಪ್ ಸೆಟ್‌ಗಳ ನಡುವೆ ಆಡುವುದು ರೂಢಿಯಾಗಿತ್ತು. ಈಗ ಆತನಿಗೆ 17 ವರ್ಷ ತುಂಬಿದೆ. ಫಿಟ್ಸ್ ಕಾಯಿಲೆಯಿಂದ ನರಳುತ್ತಿದ್ದಾನೆ.

ಅಲ್ಲಿಗೆ ಕೆಲಸಕ್ಕೆ ಸೇರಿದ ಎರಡು ತಿಂಗಳಿನಲ್ಲಿ ಶಾಲಿನಿಯ ಅದೃಷ್ಟ ಬದಲಾಯಿತು. ಆಕೆ ಡ್ಯಾನ್ಸ್ ಮಾಡುತ್ತಿದ್ದ, ಬಾರ್‌ನ ಯಜಮಾನ ಆಕೆಯನ್ನು ಮದುವೆಯಾಗುವಂತೆ ಕೇಳಿದ. ಅವರಿಬ್ಬರ ಮದುವೆ ನಿಶ್ಚಯವಾಗಿ ಕೇರಳದಲ್ಲಿ ಮದುವೆಯ ಏರ್ಪಾಡು ನಡೆಯಿತು. ಪ್ರತಿಯೊಬ್ಬರನ್ನು ಮದುವೆಗೆ ಆಹ್ವಾನಿಸಿದ್ದರೂ, ಲತಾಳನ್ನು ಮಾತ್ರ ಉದ್ದೇಶ ಪೂರ್ವಕವಾಗಿ ಕರೆಯಲಿಲ್ಲ.

ಆಕೆ ಲತಾಳಿಗಿಂತ ಚಿಕ್ಕವಳು. ನೋಡಲು ಸುಂದರವಾಗಿದ್ದಳು. ಅವಳ ಅದೃಷ್ಟ ಚೆನ್ನಾಗಿತ್ತು. ಲತಾ ರಾತ್ರಿಯೆಲ್ಲಾ ಬಾರ್‌ನಲ್ಲಿ ಕೆಲಸ ಮಾಡಿ ಹಗಲು ನಿದ್ದೆ ಮಾಡುತ್ತಿದ್ದಳು. ತಾನು ಹೋದಲೆಲ್ಲಾ ಮಗನನ್ನು ಕರೆದು ಕೊಂಡು ಹೋಗುತ್ತಿದ್ದಳು. ಹದಿನೇಳು ವರ್ಷಗಳ ನಂತರ ಆಕೆ ಮನೆಯೊಂದನ್ನು (ಮನೆಯೆಂದು ಕರೆಯಬಹುದಾದರೆ) ಮಾಡಿದ್ದಾಳೆ. 700 ರೂ ಬಾಡಿಗೆ ನೀಡುತ್ತಾಳೆ. ಇದರ ಜೊತೆಗೆ 150 ರೂ ನೀರಿಗೆ, 300 ರೂ ಕೇಬಲ್‌ಗೆ, 300 ರೂ ವಿದ್ಯುಚ್ಛಕ್ತಿಗೆ ವೆಚ್ಚ ಮಾಡುತ್ತಾಳೆ. ಅವಳ ಮೈಮುರಿತದ ದುಡಿತದಲ್ಲಿ ಕೆಲವು ಸ್ಟೀಲಿನ ಪಾತ್ರೆಗಳು, ಚಾಪೆ ನಾಲ್ಕು ಜೊತೆ ಬಟ್ಟೆ. ಎರಡು ಜೊತೆ ಚಪ್ಪಲಿ, ಎರಡು ಬ್ಯಾಗ್, ಟಿ.ವಿ., ಮೂರು ಸೂಟ್‌ಕೇಸ್, ಕೆಲವು ವಿಗ್ರಹಗಳು, ಕನ್ನಡಿ, ನೀರು ತುಂಬುವ ಒಂದು ಡ್ರಮ್, ಒಂದು ಜೊತೆ ಚಿನ್ನದ ರಿಂಗ್ ಒಂದು ಚಿನ್ನದ ವಾಚ್, (ನಿಂತಿರುವ) ಸಂಪಾದಿಸಿದ್ದಾಳೆ.

ಬಾಂಬೆಯಲ್ಲಿ ಡ್ಯಾನ್ಸ್ ಬಾರ್‌ಗಳು ಮುಚ್ಚಿದ ನಂತರ ಲತಾ ಜೀವನ ನಡೆಸುವುದು ದುಸ್ತರವಾಗಿದೆ. ಆಕೆಯ ಆತ್ಮೀಯ ಗೆಳತಿ ಬಿಲ್‌ಕಿಶ್ ಸಾಹುಳ ಸಾವಿನನಿಂದ ಲತಾ ಜರ್ಜರಿತಳಾಗಿದ್ದಾಳೆ. ಬಿಡಿಸಲಾಗದ ಆತ್ಮೀಯತೆ ಆಕೆಯ ಬದುಕು ಆಕೆಯ ಸಾವಿನಿಂದ

ಒಡೆದು ಚೂರು ಚೂರಾಯಿತು. ಬದುಕಿನ ಕಷ್ಟ ಸುಖಗಳನ್ನು ಜೊತೆ ಜೊತೆಯಾಗಿ ಹಂಚಿಕೊಂಡವರು ಅವರು. ಆಕೆಯ ಗೆಳತಿಯ ಗಂಡ ಕುಡುಕ. ಜೊತೆಯಲ್ಲಿ ಟಿ.ಬಿ.ಯಿಂದ ನರಳುತ್ತಿದ್ದ. ಆತನೇ ತನ್ನ ಹೆಂಡತಿಯನ್ನು ಸಾಯಿಸಿರ ಬೇಕೆಂಬ ಸಂಶಯವು ಲತಾಳಿಗಿದೆ.

ಲತಾ ತನ್ನ ಹುಟ್ಟೂರಿಗೂ ಹಿಂತಿರುಗಲಾರಳು. ಈಗ ಇದು ಅವಳಿಗೆ ಮರ್ಯಾಧೆಯ ಗೌರವದ ಪ್ರಶ್ನೆ. ಆಕೆಯ ಚಿಕ್ಕಪ್ಪ ಮುಂಬೈನಲ್ಲಿ ನಾಲ್ಕು ಬಾರ್‌ಗಳನ್ನು ನಡೆಸುತ್ತಿದ್ದಾನೆ. ಮುಂಬೈನಲ್ಲಿ ಅದು ಅವನ ಕುಟುಂಬದ ದೊಡ್ಡ ಯಶಸ್ವಿ ವ್ಯವಹಾರವೆಂದು ಪರಿಗಣಿಸಲ್ಪಟ್ಟಿದೆ. ಆಕೆಯ ಗೆಳತಿಯರೆಲ್ಲರ ಸ್ಥಿತಿಯು ಒಂದೇ ಆಗಿದೆ. ಡ್ಯಾನ್ಸ್ ಮಾಡುವುದು, ಅವರ ಕಾಲುಗಳು ಬಿದ್ದು ಹೋಗುವವರೆಗೆ ಮದ್ಯ. ಉಪಹಾರ ಸರಬರಾಜು ಮಾಡುವುದು. ಲತಾಳ ಗೆಳತಿ ಮರೆಯಾದ ಮೇಲೆ ಲತಾ ಒಬ್ಬಂಟಿಯಾದಳು. ಅವಳ ಮುಂದಿರುವುದು ಅವಳ ಜೀವನದ ಅವಶೇಷಗಳು ಮಾತ್ರ. ಹೊಳೆಯುವ ಟಿ.ವಿ. ಅವಳ ಮುಂದಿದೆ, ಕರೆಂಟ್ ಬಿಲ್ ಕಟ್ಟಲು ಸಾಧ್ಯವಿಲ್ಲವಾದುದರಿಂದ ಟಿ.ವಿ.ಹಾಕುವುದನ್ನೇ ಬಿಟ್ಟಿದ್ದಾಳೆ. ಅವಳ ಸುತ್ತಲಿನ ಬದುಕು ಜೀವಂತಿಕೆಯಿಂದ ಗಿಜಿಗಿಟ್ಟುತ್ತಿದೆ. ಬಟ್ಟೆ ಒಗೆಯುವುದು, ಅಡುಗೆ ಮಾಡುವುದು, ಮಕ್ಕಳ ಅಳು, ಲಾಲನೆ-ಪಾಲನೆ, ಎಲ್ಲವೂ ಜೀವಂತಿಕೆಯಿಂದ ಜಿನುಗುತ್ತಿದೆ. ಆದರೆ ಲತಾಳ ಬದುಕು ಕೆಟ್ಟ ಗಡಿಯಾರದಂತೆ ನಿಂತು ಬಿಟ್ಟಿದೆ. ಬದುಕೆಲ್ಲಾ ಒಂದು ನಟನೆ ಬದುಕ ಬೇಕಲ್ಲ. ಅದಕ್ಕಾಗಿ ಈ ನಟನೆ ಮಾಡ್ಲೇಬೇಕು. ಎಲ್ಲವನ್ನೂ ಕಳೆದು ಕೊಂಡ ಅವಳಿಗೆ ನಾಳೆಯ ಅನ್ನ ಹೇಗೆ ದೊರೆಯುತ್ತದೆ ಯೆಂಬುದು ಅವಳಿಗೆ ಗೊತ್ತಿಲ್ಲ.

**ರಾಜೇಶ್ವರಿ ಎಚ್.ಎಸ್.**

# ಆ ಹೆಣ್ಣು ನಾನಲ್ಲ

ಆ ಹೆಣ್ಣು ನಾನಲ್ಲ
ನಿನಗೆ ಕಾಲ್ಚೀಲ ಬೂಟುಗಳ ಮಾರುವ ಹೆಣ್ಣು ನಾನಲ್ಲ
ನಾನಾಕೆ, ನಿನ್ನಿಂದ ಕಲ್ಲುಗೋಡೆಗಳಲಿ ಹುದುಗಿಸಲ್ಪಟ್ಟವಳು
ಸ್ವತಂತ್ರ ಗಾಳಿಯಲಿ ನೀ ಸುತ್ತುತ್ತಿರಲು
ನನ್ನ ಧ್ವನಿ ಕಲ್ಲುಗಳಿಂದ ಕುಗ್ಗಿಸಲ್ಪಡದೆಂದು ನೀನರಿಯೆ

ನಾನಾಕೆ, ಪದ್ಧತಿ ಸಂಪ್ರದಾಯಗಳ ತೂಕದಲಿ
ನಿನ್ನಿಂದ ತುಳಿಯಲ್ಪಟ್ಟವಳು
ಆದರೆ ಕತ್ತಲನು ತೂರಿ ಬೆಳಕು ಬರಬಹುದೆಂದು
ನೀನರಿಯೆ

ನನ್ನ ನೆನಪಿಸಿಕೊ
ನಾನಾಕೆ, ಮಡಿಲಿಂದ ಹೂಗಳ ಕಿತ್ತ ನಿನ್ನಿಂದ
ಮುಳ್ಳು ಕಂಟಿಗೆಳನಲ್ಲಿ ನೆಡೆಸಿಕೊಂಡಾಕೆ
ಆದರೆ ಸರಪಳಿಗಳು ಸುವಾಸನೆಯನ್ನು ಬಿಗಿಯಲಾರವೆಂದು
ನೀನರಿಯೆ

ನಾನಾಕೆ, ನನ್ನದೇ ಶೀಲದ ಹೆಸರಿನಲಿ
ನನ್ನ ನೀಕೊಂಡು ಮಾರಿದಾಕೆ
ಆದರೆ, ಮುಳುಗುತಿರುವಾಗಲೂ ನಾ
ನೀರಮೇಲೆ ನಡೆಯಬಲ್ಲೆನೆಂದು ನೀನರಿಯೆ

ನಾನಾಕೆ, ಹೊರೆಯ ತೊಲಗಿಸಲೆಂದು ನೀ ಲಗ್ನ
ಮಾಡಿದಾಕೆ
ಆದರೆ ಬಂಧಿತ ಮನಗಳ ನಾಡೊಂದು
ಸ್ವತಂತ್ರವಾಗಿರಲಾರದೆಂದು ನೀನರಿಯೆ

ನೀ ವ್ಯಾಪಾರ ಮಾಡಿದ ಸರಕು
ನನ್ನ ಶೀಲ, ಮಾತೃತ್ವ, ನಿಷ್ಠೆಗಳು
ಆದರೆ ಈಗ ನಾನಾರಳುವ ಸಮಯ,
ನನ್ನ ಸ್ವಾತಂತ್ರ್ಯದ ಸಮಯ

ಆರೆ ನಗ್ನದಲಿ ಕಾಲ್ಚೀಲ ಬೂಟುಗಳ ಮಾರುವ
ಭಿತ್ತಿ ಚಿತ್ರದ ಹೆಣ್ಣು,
ಅಲ್ಲ, ಅಲ್ಲ ನಾನಲ್ಲ ಆ ಹೆಣ್ಣು

ಕವಯಿತ್ರಿ 'ಕಿಶ್ವರ್ ನಾಹೀದ್' ಅವರ ಪದ್ಯದ
(I am not that woman) ಅನುವಾದ

ಕನ್ನಡಕ್ಕೆ : ಮೈಥಿಲಿ ಬಿ.ಜಿ.
ಆಂಗ್ಲ ಉಪನ್ಯಾಸಕಿ

# ದ್ವಿತ್ವ ಪುಸ್ತಕ ಪರಿಚಯ

ಕೃತಿ :- ದ್ವಿತ್ವ.
ಲೇಖಕಿ :- ಡಾ||ಆರ್.ಸುನಂದಮ್ಮ
ಮೊದಲಮುದ್ರಣ :- 2005
ಪ್ರಕಾಶಕರು:-ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು
ಬೆಲೆ :- 300/-

ಇನ್ನೇನು ಕಾದಂಬರಿಯ ಕಾಲ ಮುಗಿದೇ ಹೋಯಿತು ಅನ್ನುತ್ತಿರುವ ಹೊತ್ತಿನಲ್ಲೇ 'ದ್ವಿತ್ವ' - ಆರ್. ಸುನಂದಮ್ಮನ ಕಾದಂಬರಿ ಪ್ರಾಣವಾಯುವಿನಂತೆ ಹೊಸ ವಿನ್ಯಾಸ - ಭಾಷಾತಂತ್ರ - ನವೀನ ಕಥಾವಸ್ತು - ಪ್ರಾದೇಶಿಕ ಭಾಷಾ ಸೊಗಡಿನಿಂದ ಭರವಸೆಯ ಬೆಳಕಿನಂತೆ ಕಂಡು ಬಂದಿದೆ.

ದೇವನೂರ ಮಹಾದೇವ, ಗೀತಾನಾಗಭೂಷಣ, ಎಂ.ಎಸ್.ವೇದಾ, ಎಚ್. ನಾಗವೇಣಿ, ಅಮರೇಶ ನುಗಡೋಣಿ, ಬಾಳಾ ಸಾಹೇಬ ಲೋಕಾಪುರ ಮುಂತಾದವರ ಪ್ರಾದೇಶಿಕ ಪ್ರಭೇದಗಳಿರುವ ಕಾದಂಬರಿಗಳ ಜಾಡಿನಲ್ಲೇ ಈ ಕಾದಂಬರಿಯು ಕೋಲಾರ - ಚಿಂತಾಮಣಿ ಕಡೆಯ ಭಾಷಾ ಬಳಕೆ ಕಾದಂಬರಿಯುದ್ದಕ್ಕು ಇದ್ದು, ಲೇಖಕಿ ಬಹಳ ಸಮರ್ಥವಾಗಿ ಭಾಷೆಯನ್ನು ದುಡಿಸಿಕೊಂಡಿದ್ದಾರೆ.

ಮುನ್ನುಡಿಯಲ್ಲಿ ಕೆ.ವಿ. ನಾರಾಯಣರು ಗುರುತಿಸಿರುವಂತೆ ಇಲ್ಲಿಯ ಸ್ತ್ರೀ ಪಾತ್ರಗಳು ಕಾರಂತ ಕಾದಂಬರಿ ಮಾದರಿಯಂತಿರದೇ ಭಿನ್ನವಾಗಿದೆ ಹೆಸರೇ ಸೂಚಿಸುವಂತೆ ಇಬ್ಬರೂ ಹೆಂಗಸರ ಕಥೆಯೇ ಪ್ರಧಾನ ಆಗಿದ್ದರೂ, ದಲಿತ ಲೋಕದ ಹಾಗೂ ಅದೇ ಸಮಕಾಲೀನ ಸಮಾಜದ ಇತರೆ ವರ್ಗದ ಹೆಣ್ಣುಗಳ ಚಿತ್ರಣಕ್ಕೆ ಇಲ್ಲಿ ವಿಪುಲ ಅವಕಾಶ ಸಿಕ್ಕಿದೆ.

'ದ್ವಿತ್ವ' ಕಾದಂಬರಿಗೂ - ಕುವೆಂಪುರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕಥನ ಕ್ರಮಕ್ಕೂ ದಟ್ಟವಾದ ಹೋಲಿಕೆ ಕಂಡು ಬರುತ್ತದೆ.

ಇಲ್ಲಿ ಬರುವ ಮಾದಿಗರ ತಿಮ್ಮಿ - ದೊಮ್ಮೆಯರ ವಿಷಮ ದಾಂಪತ್ಯ - ಕುಡುಕತನದಿಂದ ಮಗು ಲಕ್ಕಿ ಸತ್ತದ್ದು (ಪು.325), ಅಗಸರ ಪಿಳ್ಳವ್ವನ ಮಗಳು ಶಾಂತಿ ಹಾಗೂ ಆಳು ಮಗ ತಿಮ್ಮರ ನಡುವಿನ ಪ್ರೇಮ-ಸಾಹಸ- ವಿವಾಹಕ್ಕೆ ಎದುರಾಗುವ ಅಡ್ಡಿ ಪ್ರಸಂಗಗಳು (ಪ.252) ಮಲೆಗಳಲ್ಲಿ ಮದುಮಗಳು ಕಾದಂಬರಿಯ ಗುತ್ತಿ - ತಿಮ್ಮಿಯರನ್ನು ನೆನಪಿಸುತ್ತದೆ.

70 ರ ದಶಕದಲ್ಲಾದ ಪ್ರಮುಖ ರಾಜಕೀಯ ಬದಲಾವಣೆಗಳನ್ನೇ ಲೇಖಕಿ ಆರಿಸಿಕೊಂಡು ಅವುಗಳನ್ನೆಲ್ಲ ಒಂದು ಬಂಧದಲ್ಲಿ ಕಟ್ಟಿಕೊಡುತ್ತಾ ಹೋಗುತ್ತಾರೆ. ಮುಖ್ಯವಾಗಿ - ಉಳುವವನಿಗೆ ಭೂಮಿ ಕಾಯ್ದೆ ಬಂದ ಸಂದರ್ಭ ಹಾಗೂ ಮಾನ್ಯ ಜಮೀನು ಬಿಟ್ಟು ಕೊಡುವ ಪ್ರಸಂಗ, ಸರ್ವರಿಗೂ ಶಿಕ್ಷಣದಿಂದ - ಅದರಲ್ಲೂ ಹಿಂದುಳಿದ ವರ್ಗಕ್ಕೆ ದೊರಕಿದ ಅವಕಾಶ, ದಲಿತ ಸಂಘಟನೆ ಮುಖಾಂತರ ಆದ ಸಾಮಾಜಿಕ ಸ್ಥಿತ್ಯಂತರವನ್ನು ಹಳ್ಳಿ ಕೇಂದ್ರವಾಗಿಸಿಕೊಂಡು ಅದರಿಂದ ಕುಟುಂಬದಲ್ಲಾಗುವ ಹಾಗೂ ಹಳ್ಳಿಯಲ್ಲಿ ಉಂಟಾಗುವ ಅನೇಕ ಪಲ್ಲಟಗಳನ್ನು ಸೂಕ್ಷ್ಮ ವಿವರಗಳ ಮೂಲಕ ಹೇಳುತ್ತಾ ಹೋಗುತ್ತಾರೆ.

ಸ್ತ್ರೀ ಸಂವೇದನಾ ಶೀಲ ಮನಸ್ಸು ಕುಟುಂಬದಲ್ಲಾಗುವ ಬದಲಾವಣೆಗಳನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸಬಲ್ಲದು ಎಂಬುದಕ್ಕೆ ಉದಾ-ಪುರುಷ ಪ್ರಾಧಾನ್ಯತೆಯ ಒಟ್ಟು ಕುಟುಂಬದಲ್ಲಿ ತಮ್ಮಂತೆಯೇ ಇದ್ದು, ಆಕಸ್ಮಿಕವಾಗಿ ಸಿಕ್ಕ ಯಜಮಾನನ ಪತ್ನಿ ಪಟ್ಟದಿಂದ ಅಧಿಕಾರ ಚಲಾಯಿಸುವ ಓರಗಿತ್ತಿಯ ಸ್ವಭಾವ ಕುರಿತು ಸೂಕ್ಷ್ಮ ಒಳ ನೋಟಗಳು ಸಿಕ್ಕುತ್ತವೆ (ಪು.81)

ಜಾತಿ ವ್ಯವಸ್ಥೆ ಹೆಣೆಯಲ್ಲಿರುವ ಅನೇಕ ಸೂಕ್ಷ್ಮ-ಕ್ರೂರವೆನಿಸುವ ಸಂಗತಿಗಳು ಹಳ್ಳಿಯನ್ನೇ ಕೇಂದ್ರವಾಗಿಟ್ಟುಕೊಂಡು, ಪ್ರಧಾನ ಸಂಸ್ಕೃತಿಯೆದುರು - ಅಧೀನ ಸಂಸ್ಕೃತಿಗಳು ಹೇಗೆ ತಲೆಬಾಗಿ ಕ್ರಮೇಣ ಪ್ರಧಾನ ಸಂಸ್ಕೃತಿಯ ಪ್ರಾಬಲ್ಯದೆದುರು ತಮ್ಮ ಸ್ಥಾನವನ್ನು ಬಿಟ್ಟುಕೊಟ್ಟು ಮೂಲೆಗುಂಪಾಗಿ ಹೋಗುತ್ತವೆ ಎಂಬುದನ್ನು ಈ ಪ್ರಸಂಗಗಳು ಬಿಚ್ಚಿಡುತ್ತಾ ಹೋಗುತ್ತವೆ. ಉದಾಹರಣೆಗೆ - ಗ್ರಾಮ ದೇವತೆಗಳಾದ ಚೌಡೇಶ್ವರಿ, ಮುನೇಶ್ವರ, ಸಪ್ಲಮ್ಮ, ದುಗ್ಗಲಮ್ಮ ಮುಂತಾದ ಅಮ್ಮನೋರ ಗುಡಿಗಳು ಪುರುಷ ದೇವಸ್ಥಾನಗಳಾಗಿ ಪರಿವರ್ತನೆ ಹೊಂದುವುದನ್ನು, ಕಾದಂಬರಿಯಲ್ಲಿ ಬರುವ ಮೇಷ್ಟು ಪಾತ್ರವು - ಹಾಗೇ ಹೇಳುತ್ತದೆ "ಊರು ಅಂದ್ರೆ ಒಂದು ಯಾವುದಾದರೂ ಗಂಡು ದೇವರ ಗುಡಿ ಬ್ಯಾಡ ಅಂದ್ರೆ ಹೇಗೆ ?" (ಪು.87)

ಹೊಸ ದ್ಯಾವ್ರ ಸಿದ್ಧತೆಯ ಪ್ರಸಂಗ (ಪು.35) ಇವು ಸಮಾಜ ಶಾಸ್ತ್ರೀಯ ಅಧ್ಯಯನಕ್ಕೆ ಹೊಸ ಹೊಳಹುಗಳನ್ನು ನೀಡುವಲ್ಲಿ ಸಹಾಯಕವಾಗಿವೆ.

ಈ ಹೊತ್ತಿನ ಅಧ್ಯಯನವೇನಿದ್ದರೂ ಅನ್ಯ ಶಾಸ್ತ್ರೀಯ ಶಿಸ್ತನ್ನು ಬಯಸುವಂತದ್ದು. ಹಾಗಾಗಿ ಕಾದಂಬರಿಯಲ್ಲಿ ಉಪಸಂಸ್ಕೃತಿ ಅಧ್ಯಯನಕ್ಕೆ ನೆರವಾಗಬಲ್ಲ ಅನೇಕ ಸಂಗತಿಗಳು ಅಡಕವಾಗಿವೆ.

ಉದಾ : ಇದುವರೆಗೂ ಓದುಗರಿಗೆ ಮೇಲ್ವರ್ಗದ ಆಹಾರ-ಕ್ರಮದ ಕುರಿತೇ ಹೆಚ್ಚು ಪರಿಯಚವಿದ್ದು, ಕೆಳವರ್ಗದ ಆಹಾರ

ಪದ್ಧತಿ, ಅದನ್ನು ತಯಾರಿಸುವಾಗ ಪಡುವ ಸಣ್ಣ ಸಣ್ಣ ಸಂಭ್ರಮ - ಸಡಗರ ಹೊಸತೇ ಅನ್ನಬಹುದು. ಇಲ್ಲಿ ಅದಕ್ಕೆ ಹೇರಳ ಅವಕಾಶ ಸಿಕ್ಕಿದೆ.

ಎಲೆ - ಅಡಿಕೆ ಜಗಿಯುವ ಪ್ರಸಂಗ ಕಾದಂಬರಿಯುದ್ದಕ್ಕೂ ಪಾತ್ರಗಳು ತಮ್ಮ ದುಃಖ - ದುಮ್ಮಾನ - ದುಗುಡವನ್ನ ಇಳಿಸಲಿಕ್ಕೆ ಬಳಕೆಯಾಗಿರುವುದು, ಹೊಸ ದ್ಯಾವ್ರ ಸಿದ್ಧತೆ ಕ್ರಮ ಇನ್ನೂ ಮುಂತಾದವು ಮನಃ ಶಾಸ್ತ್ರೀಯ ದೃಷ್ಟಿಯಿಂದಲೂ ನೋಡಲು ಅನುವು ಮಾಡಿಕೊಟ್ಟವೆ.

'ಅವ್ವಾ' ಅನ್ನುವ ಸಾರ್ವತ್ರಿಕ ಪದಕ್ಕೆ ಪರ್ಯಾಯವಾಗಿ ಇದುವರೆಗೆ ಕೇಳಿಯೇ ಇರದ ಇನ್ನಿತರ ಹೆಸರುಗಳಿರುವುದನ್ನು ಲೇಖಕಿ ಪರಿಚಯಿಸಿದ್ದಾರೆ.

ಉದಾ.ಗೆ-ದೋ, ದವ್ವ, ದೂವ್, ದಾ ಮುಂತಾದವು ಭಾಷಾಶಾಸ್ತ್ರ ಅಧ್ಯಯನಕ್ಕೂ ನೆರವಾಗುವಂತದ್ದು.

ಇದರ ಜತೆಗೆ ಭಾಷಾ-ನುಡಿಗಟ್ಟನ್ನು ಲೇಖಕಿ ಕಡೆಯಲ್ಲಿ ನೀಡಿದ್ದರೆ ಸರಾಗ ಓದಿಗೆ ಮತ್ತಷ್ಟು ಸಹಾಯವಾಗುತ್ತಿತ್ತು.

ಕಾದಂಬರಿಯಲ್ಲಿ ಅಲ್ಲಲ್ಲಿ ಬರುವ ಲೈಂಗಿಕ ವಿಚಾರವಾಗಲಿ, ಪುಟ್ಟನಂಜಿ ಕೆಂಪಣ್ಣನ ಪ್ರಣಯ ಚೇಷ್ಟೆಯಾಗಲಿ - ಓದುಗರಿಗೆ ರಂಜಕವೆನಿಸುವಂತೆ ರೋಚಕವೆನಿಸುವಂತೆ ವರ್ಣಿಸದೆ, ಕತೆಗೆ ಅತ್ಯವಶ್ಯಕವೆನಿಸುವಂತೆ ಅತ್ಯಂತ ಸಂಯಮದಿಂದ ಚಿತ್ರಣಗೊಂಡಿದೆ. ಬರಹವೆಂಬುದಕ್ಕೆ ಸ್ತ್ರೀ-ಪುರುಷನೆಂಬ ಲಿಂಗಭೇದವಿಲ್ಲವಯ್ಯಾ ಎಂಬ ಅಕ್ಕನ ವಚನ ನೆನಪಾಗುತ್ತದೆ. ಕಾದಂಬರಿಯ ವಿಶಾಲ ಭಿತ್ತಿಯಲ್ಲಿ ಮುಕ್ತ ಅಭಿವ್ಯಕ್ತಿಯಾಗಿ ಸ್ತ್ರೀ ಮನಸ್ಸಿನ ಅನಾವರಣವಾಗಿದೆ.

ಕಾದಂಬರಿಯಲ್ಲಿ ಬರುವ ಪ್ರಕೃತಿ ವರ್ಣನೆ - ರೂಪಕಗಳು - ಹೆಣ್ಣಿಗೆ ಅಲಂಕರಿಸಿದ ಒಡವೆಗಳಂತಿರದೇ - ಅವಳ ಸಹಜ ಚೆಲುವಿನಲ್ಲಿ ಅಂತರ್ಗತವಾಗಿರುವಂತೆ ಬಂದಿವೆ. ಪ್ರಕೃತಿ ಆಸ್ವಾದನೆಗೆ ಓದು-ವಿದ್ಯೆ ಸಂಸ್ಕಾರವೇ ಇರಬೇಕಿಂದಿಲ್ಲ. ಮುಗ್ಧ ಹಳ್ಳಿ ಹೆಂಗಸು ಕಲ್ಲಮ್ಮ ಮೋಡಗಳ ಚಿತ್ತಾರವನ್ನು ಆನಂದದಿಂದ ಆಸ್ವಾದಿಸಬಲ್ಲಳು ಎಂಬುದು (ಪು.43) ರಲ್ಲಿ ಬಂದಿದೆ ಊರವರೆಲ್ಲಾ ಗಿಡಗಳಂತೆ ಸ್ತಬ್ಧರಾದರು. (ಪು.270) ಭೂಮಿಯಂತೆ ಭಾರವಾಗಿದ್ದಳು. (ಪು.271), ಅವಳು ದುಃಖದಿಂದ ಬಿರಿದ ದಾಳಿಂಬೆಯಂತೆ ಕಂಡಳು. (ಪು 283), ಅಶ್ವತ್ಥನ ಮನಸ್ಸು ಒಡೆದ ಹಾಲಿನಂತಾಯಿತು. (ಪು.162) ರೂಪಕಗಳು ಸೋಪಜ್ಞವಾಗಿವೆ.

ಕಾದಂಬರಿಯ ಎಲ್ಲಾ ಪಾತ್ರಗಳು ಕಡೆವರೆಗೂ ಹೋರಾಟ ಮನೋಭಾವವನ್ನು ಪ್ರದರ್ಶಿಸುತ್ತಾ ಹೋಗುತ್ತವೆ. ಈ ಹೋರಾಟದ spirit ಕಾದಂಬರಿಯ ಅಂತ್ಯದವರೆಗೂ ಕಾಯ್ದುಕೊಂಡು, ಓದಿಸಿಕೊಂಡು ಹೋಗುವ ಗುಣವಿದೆ.

ಮೇಲ್ವರ್ಗದ ಕಲ್ಲಮ್ಮ, ಅಕ್ಕಮ್ಮ, ಚಿನ್ನಮ್ಮ, ಸಾಕಮ್ಮರಲ್ಲದೇ, ದಲಿತರಲ್ಲಿಯೇ ಅತ್ಯಂತ ಹಿಂದುಳಿದ ಮಾದಿಗರ - ಜಬ್ಬಿ, ಮುತ್ಯಾಲಿ, ಮುದ್ದಿ, ಪುಟ್ಟನಂಜಿಯರ ಬದುಕು - ಬವಣೆಯನ್ನು ಲೇಖಕಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ದುಷ್ಟ X ಶಿಷ್ಟ ಶಕ್ತಿಗಳ ನಡುವಣ ಸೆಣಸಾಟದಲ್ಲಿ ಕಡೆಯಲ್ಲಿ ಒಳಿತಿಗೆ ಜಯವಾಗುತ್ತದೆ ಎಂಬ ಸಕರಾತ್ಮಕ ಆಶಯವನ್ನು ಕಾದಂಬರಿ ಅಂತರ್ಗತವಾಗಿಸಿಕೊಂಡು, ಬದುಕು ಎಂದಿಗೂ ಮುಗಿದು ಹೋಗುವುದಿಲ್ಲ, ಮುನ್ನಡೆಯುತ್ತಲೇ ಇರುತ್ತದೆ ಎಂಬುದನ್ನು ಅನೇಕ ಗಟ್ಟಿ ಉದಾಹರಣೆಗಳ ಮೂಲಕ ಕಾದಂಬರಿ ಕಟ್ಟಿ ಕೊಡುತ್ತದೆ. ಬದುಕನ್ನು ಕೆಡವಲು ದುಷ್ಟ ಶಕ್ತಿಗಳು ಅನೇಕ ಒಳಸಂಚುಗಳ ಮುಖಾಂತರ ಹವಣಿಸಿದರೂ - ಬದುಕನ್ನ ಕಟ್ಟಿಕೊಳ್ಳುವ ಜೀವಂತ ಪ್ರಕ್ರಿಯೆ ಕಾದಂಬರಿಯುದ್ದಕ್ಕೂ ಅಂತಃ ಶಕ್ತಿಯಾಗಿ ಕೆಲಸ ಮಾಡಿದೆ.

ಮಲ್ಲಪ್ಪ - ತಮ್ಮನ ಮಗನನ್ನು ಮಾಳಿಗೆಯಿಂದ ತಳ್ಳಿ ಬೀಳಿಸಿದರೂ - ಬದುಕಿ ಉಳಿಯುವ ಪ್ರಸಂಗ (ಪು. 90)

ಪುಟ್ಟನಂಜಿ ತೋಟದ ಮೆಣಸಿನ ಗಿಡ ನಾಶ (ಪು.266) ಮಲ್ಲಪ್ಪ ಆ ಕುತಂತ್ರದಿಂದ ಕಲ್ಲಮ್ಮನನ್ನು ಸಿಗಿಸುವ ಪ್ರಸಂಗ.

ಮದುವೆಯಿಂದ ಯಾವ ಸುಖ ಪಡದ ಕಲ್ಲಮ್ಮ - ಒಟ್ಟು ಕುಟುಂಬ ಪಾಲಾದಾಗ - ತನಗೆ ಅನ್ಯಾಯವಾಗಿದ್ದರೂ, ಹೆಸರಿಗೆ ತಕ್ಕಂತೆ ದೇಹ - ಮನಸ್ಸನ್ನು ಕಲ್ಲಾಗಿಸಿಕೊಂಡು, ಪಾಳು ಬಿದ್ದ ತೋಟವನ್ನು ಹಸಿರಿನಿಂದ ನಳನಳಿಸುವಂತೆ ಮಾಡುತ್ತಾಳೆ.

ಪುಟ್ಟನಂಜಿಯ ಮಗ ಕೆಂಪ ದಲಿತ ಸಂಘಟನೆಯ ಮುಂದಾಳಾಗಿ - ಗೋಮಾಳದ ಜಮೀನನ್ನು ಊರಿನಲ್ಲಿರುವವರಿಗೆ ಸಮಾನ ಹಂಚಿಕೆಯಾಗಬೇಕೆಂದು ಬಯಸಿ ಹೋರಾಟ ನಡೆಸುತ್ತಿದ್ದರೆ, ಮಲ್ಲಪ್ಪನ ಮಗ ನಾಗರಾಜ ಅಪ್ಪನ ದುಷ್ಟತನದ ಪಳೆಯುಳಿಕೆಯಂತೆ ಅದನ್ನು ಸಹಿಸದೆ ಪಿತೂರಿ ನಡೆಸಿ ಕೆಂಪನನ್ನು ಕೊಲೆ ಮಾಡಿಸುತ್ತಾನೆ (ಪು 347)

ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣನ್ನು ದರ್ಪ - ದೌರ್ಜನ್ಯಗಳ ಮೂಲಕ ತನ್ನ ಅಧೀನದಲ್ಲಿಟ್ಟು ಕೊಳ್ಳಲು ಬಯಸುವ ಅನೇಕ ಪ್ರಸಂಗಗಳು ಕೃತಿಯಲ್ಲಿ ಹೇರಳವಾಗಿ ದೊರಕುತ್ತವೆ.

ಕೆಂಪಣ್ಣ ತನ್ನ ಹೆಂಡತಿ ಕಲ್ಲಮ್ಮ ಮಲಗುವ ಕೋಣೆಗೆ ಬೀಗ ಹಾಕಿ ಹೋಗುವ ಸನ್ನಿವೇಶ (ಪು 41) ತಾಯಿ, ಕಲ್ಲಮ್ಮ - ಹೆಂಡತಿ

ಮುನಿಲಕ್ಷ್ಮಿ ಜಗಳ ಕಂಡು ಸಿಟ್ಟಾದ ಮಗ ಕೆಂಪಣ್ಣ ಇಬ್ಬರ ಜುಟ್ಟು ಹಿಡಿದು ಗಂಟಾಕಿ, ಇಬ್ಬರ ಕಿವಿಗಳಿಗೂ ಸೇರಿಸಿ ಬೀಗ ಹಾಕುವ ಪ್ರಸಂಗ (ಪು.353) ಕಲ್ಲಮ್ಮ ಉಕ್ಕುವ ಹರೆಯದಲ್ಲಿ ಉಕ್ಕುವ ದೇಹಬಯಕೆಯನ್ನು ಕಟ್ಟಿಟ್ಟು ಮಗನ ಬದುಕು ನೇರ್ಪು ಮಾಡಲು ಹೆಣಗುವುದು ಅವಳಿಗೆ ತನ್ನ ಗುರಿಮಾತ್ರ ಮುಖ್ಯವಾಗಿತ್ತು. ಅದು ಮಗನಾಗಿದ್ದನು. ಅವಳೆಂದರೆ ಮಗನಾಗಿದ್ದನು. (ಪು. 264) ಹೊಟ್ಟೆ ಬಟ್ಟೆ ಕಟ್ಟಿ, ದುಡಿದು ಉಳಿಸಿದ ತನ್ನದೇ ಸಂಪಾದನೆಯನ್ನು - ಕಷ್ಟದಲ್ಲಿರುವ ತನ್ನ ತವರಿಗೆ ಕೊಡಲು ಸ್ವಾತಂತ್ರ್ಯವಿರದ ಹೆಣ್ಣಾಗಿ ಕಲ್ಲಮ್ಮ - ಕಡೆಯಲ್ಲಿ ತೆಗೆದುಕೊಳ್ಳುವ ಬದುಕಿನ ನಿರ್ಧಾರ ಜೀವನ್ಮುಖಿಯಾದದು.

ಇಂದು ಸ್ತ್ರೀವಾದ ಹೊಸ ಸಾಧ್ಯತೆಗಳ ಹೊರಳು ದಾರಿಯಲ್ಲಿದ್ದು, ಇಂದಿನ ಹೋರಾಟವು ಪುರುಷ ವಿರೋಧಿಯಾದುದಲ್ಲ. ಅದು ಸಹಬಾಳ್ವೆಯ ನೆಲೆಯಲ್ಲಿ ಜತೆಜತೆಯಾಗಿ ಮಾನವತೆಯೆಡೆಗೆ ಸಾಗುವುದಾಗಿದೆ.

ಎಲ್ಲ ಜೀವ ವಿರೋಧಿ ಶಕ್ತಿಗಳ ನಡುವಲ್ಲೇ ನಾರಾಯಣನಂತಹ ಹಳ್ಳಿಯ ಮುಗ್ಧ ಅಮಾಯಕ ಹೃದಯವಂತ - ಕಲ್ಲಮ್ಮನಿಗೆ ಸಖನಾಗಿ ನಿಲ್ಲುವ ಸಂದರ್ಭ ಭರವಸೆಯ ಬೆಳಕಿನಂತೆ ಕಂಡು ಬರುತ್ತದೆ.

**ಸಿ. ಹೇಮಲತಾ**
ಮೈಸೂರು.

## ಹಸಿವು ಹಾಗೆ.......

ಪ್ರಾಸಂಗಿಕವಾಗಿ ಇಲ್ಲಿ
ಹೇಳುವುದೆ ಉಚಿತ
ಹಸಿದು ರೊಟ್ಟಿಗಾಗಿ
ಅರಸುತ್ತಿರುವಾಗಲೇ ಸಿಕ್ಕಳು
ಲೈವ್ ಬ್ಯಾಂಡಿನಲಿ ಕುಣಿವ
ಅವಳು ಅವನಷ್ಟೇ ಹಸಿದಿದ್ದಳು
ಪ್ರೀತಿ ಮಾತ ಕಲಿಸಿ
ಜೊತೆಗೆ ಉಂಡ ಕ್ಷಣಗಳು
ಅವಳಿಂದಲೇ ಹಣ
ಕಸಿದು ರಂ ಕುಡಿದು
ಮತ್ತ್ಯಾರೊಂದಿಗೋ
ಅಲೆಯುವುದ ಕಲಿಸಿತು
ಹಸಿವು ಹಾಗೆ
ಜೀವಂತವಾಗಿತ್ತು.

**ಡಾ. ಕವಿತಾ ರೈ. ಬಿ. ಆರ್**

## ಕಲ್ಲಿನಂತಹ ಕಲ್ಲು

ಬೆನ್ನ ಚರ್ಮವನ್ನು
ಸುಟ್ಟು ಹಾಕುವ ಬಿಸಿಲಲ್ಲಿ
ಒಡೆದ ಕಲ್ಲಿಗೆ ಬಿರುಕು
ಬಿಟ್ಟ ಕೈಗಳಲ್ಲಿ
ಹಿಡಿದ ಹಣವನ್ನೆಲ್ಲ
ಹೆಂಡಕ್ಕೆ ಸುರಿದಳು
ಅದಕ್ಕೆ ನಂಚಿ ಲಹರಿಯಲಿ
ಗಿಡುಗನ ಗೀತೆ ಹಾಡಿ
ಕುಣಿದು ದಾರಿದ್ರ್ಯದ
ಹೊತ್ತಿ ಉರಿವ ಕತೆ
ಹೇಳಿ ರಾತ್ರಿಯ ಮಲಗಿಸಿದಳು
ಸಾವಿನ ಪಕ್ಕ ಕುಳಿತಂತೆ
ಹುಟ್ಟುವ ಸೂರ್ಯ
ಅಮಾಯಕನಾಗಿ ಕಂಡು
ದುಡಿಮೆಗೆ ಮೈಯೊಡ್ಡಿ ನಿಂತಳು
ಹೊರಟುನಿಂತ ಮಗನ
ಹರಿದ ಚಡ್ಡಿ ಮುರಿದ ಪಾಠಿ
ಯ ನೆನೆದು ಕೈಗಳಿಗೆ ಕಸು ತುಂಬಿ
ಒಡೆದೆ ಒಡೆದಳು ಕಲ್ಲು
ಕಲ್ಲಿನಂತಹ ಕಲ್ಲು.

**ಡಾ.ಕವಿತಾ ರೈ ಬಿ.ಆರ್**

# ಮಹಿಳಾ ಸಾಹಿತ್ಯ ಪರಂಪರೆ, ಆಧುನಿಕತೆ ಮತ್ತು ಸದ್ಗುಣೆ ಕೃಷ್ಣಾಬಾಯಿ

ಸದ್ಯದ ಸಂಶೋಧನಾ ತಿಳುವಳಿಕೆಯ ಪ್ರಕಾರ 1908ರಲ್ಲಿ ಪ್ರಕಟಗೊಂಡಿರುವ ಶಾಂತಾಬಾಯಿ ನೀಲಗಾರ ಅವರ 'ಸದ್ಗುಣೆ ಕೃಷ್ಣಬಾಯಿ' ಅಥವಾ 'ಉತ್ತಮ ಗೃಹಿಣಿ' ಕೃತಿಯು ಕನ್ನಡದ ಆಧುನಿಕ ಮಹಿಳಾ ಸಾಹಿತ್ಯದ ಮೊದಲ ಕೃತಿಯೆನಿಸಿದೆ. ಈ ಹಿಂದೆ ಮಹಿಳಾ ಸಾಹಿತ್ಯ ಪರಂಪರೆಯ ಶೋಧದ ಮೂಲಕ ನಂಜನಗೂಡು ತಿರುಮಲಾಂಬ ಅವರನ್ನು ಆಧುನಿಕ ಸಾಹಿತ್ಯದ ಮೊದಲ ಲೇಖಕಿಯಾಗಿ ಪರಿಚಯಿಸಿದ್ದ ವಿಜಯಾ ದಬ್ಬೆಯವರೇ ಆ ತಿಳುವಳಿಕೆಯನ್ನು ವಿಸ್ತರಿಸಿ, ಶಾಂತಾಬಾಯಿ ನೀಲಗಾರರನ್ನೂ ಬೆಳಕಿಗೆ ತಂದು ಆಧುನಿಕ ಮಹಿಳಾ ಸಾಹಿತ್ಯದ ಇತಿಹಾಸವನ್ನು 5-6 ವರ್ಷಗಳಷ್ಟು ವಿಸ್ತರಿಸಿದ್ದಾರೆ.

ಶಾಂತಾಬಾಯಿಯವರೇ ಪ್ರಸ್ತಾಪಿಸಿರುವಂತೆ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಆಹ್ವಾನದ ಮೇರೆಗೆ 'ಸಂತುಷ್ಟೋ ಭಾರ್ಯಯಾ ಭರ್ತಾ, ಭರ್ತಾಭಾರ್ಯಾ ಪರಸ್ಪರಮ್ ॥ ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ । ತತ್ರ ವೈಧ್ರುವಮ್' ಎಂಬ ಮನುವಿನ ಉಕ್ತಿಯನ್ನು ಆಧರಿಸಿ ಅದನ್ನೊಂದು ಕಥಾನಕವಾಗಿ ಕಟ್ಟಿಕೊಡಲು ಸದ್ಗುಣೆ ಕೃಷ್ಣಬಾಯಿ ಕೃತಿಯಲ್ಲಿ ಯತ್ನಿಸಿದ್ದಾರೆ.

ಸದ್ಗುಣೆ ಕೃಷ್ಣಬಾಯಿ ಕೃತಿಯ ಚಾರಿತ್ರಿಕ ಮಹತ್ವವನ್ನು ಗಮನದಲ್ಲಿಟ್ಟುಕೊಂಡು ಕೃತಿ ವಿಶ್ಲೇಷಿಸಿರುವ ದಬ್ಬೆಯವರು, ಅದನ್ನು 'ಸಾಂಪ್ರದಾಯಿಕ ರೂಪ ಹೊಂದಿದ ಆಧುನಿಕ ಸತ್ವ'ದ ಕೃತಿಯಾಗಿ ಗುರುತಿಸಿದ್ದಾರೆ. ಅದಕ್ಕೆ ಸಮರ್ಥನೆಯಾಗಿ ಕರ್ತೃತ್ವ ಶಕ್ತಿ ಹೊಂದಿದ ನಾಯಕಿಯ ನಿರ್ಮಾಣ, ದಾಂಪತ್ಯ ಸಂಬಂಧ ಕುರಿತ ಪುರೋಗಾಮಿ ದೃಷ್ಟಿಕೋನ ಹಾಗೂ ಸ್ತ್ರೀ ಶಿಕ್ಷಣದ ಪ್ರತಿಪಾದನೆಯ ಅಂಶಗಳನ್ನು ಗುರುತಿಸಿದ್ದಾರೆ. ಕೃತಿಯಲ್ಲಿ ಮೇಲುನೋಟಕ್ಕೇ ಕಾಣಿಸುವ ಸಂಪ್ರದಾಯ ನಿಷ್ಠತೆ ಹಾಗೂ ವೈಚಾರಿಕ ಮಿತಿಗಳನ್ನು ಆ ಕಾಲಘಟ್ಟದ ಹಿನ್ನೆಲೆಯಲ್ಲಿ ಗಮನಿಸಬೇಕೆನ್ನುತ್ತ 'ಆಧುನಿಕ ಕನ್ನಡದ ಮೊದಲ ಲೇಖಕಿಯ ಒಳಸತ್ವವೇ ಆಧುನಿಕತೆ ಮತ್ತು ವಿಚಾರಪರತೆಯನ್ನು ಮೈಗೂಡಿಸಿಕೊಂಡಿರುವುದು ಮುಂದಿನ ಸ್ತ್ರೀಪರ ಮುನ್ನಡೆಗೆ ಹಸಿರು ಬಾವುಟ ತೋರಿದಂತಾಗಿದೆ' ಎನ್ನುತ್ತಾರೆ. ಅಂತೆಯೇ ಸದ್ಗುಣೆ ಕೃಷ್ಣಬಾಯಿ ಕೃತಿಗೆ ಸಲ್ಲಬೇಕಾದ ಎಲ್ಲ ಚಾರಿತ್ರಿಕ ಮಹತ್ವವನ್ನು ಗೌರವಿಸುತ್ತಲೇ ಕೃತಿಯನ್ನು ಒಂದಿಷ್ಟು ವಿವರಗಳಲ್ಲಿ ಪರಿಶೀಲಿಸುವುದು ಈ ಲೇಖನದ ಉದ್ದೇಶವಾಗಿದೆ.

ವಿಜಯಾದಬ್ಬೆಯವರು ಆಧುನಿಕ ಸತ್ವ ಎನ್ನುವ ಮಾತನ್ನು ಸಾಮಾನ್ಯಾರ್ಥದಲ್ಲಿ ಅಂದರೆ ಪುರೋಗಾಮಿ, ಹೊಸತನದಿಂದ ಕೂಡಿದ್ದು, ಸಾಂಪ್ರದಾಯಿಕತೆಗೆ ಎರವಾದುದು ಇತ್ಯಾದಿ ಅರ್ಥದಲ್ಲಿ ಬಳಸಿದ್ದಾರೆ. ಆದರೆ ಆಧುನಿಕೋತ್ತರ ಕಾಲಘಟ್ಟದಲ್ಲಿ ನಿಂತಿರುವ ನಾವು ಕೃತಿಯಲ್ಲಿ ಕಾಣಿಸಿಕೊಳ್ಳುವ, ಪ್ರತಿಪಾದಿತವಾಗುವ ವಿಚಾರಗಳನ್ನು ಬರಿದೆ ಹೊಸ ವಿಚಾರವೆಂದು ಭಾವಿಸದೆ, ಒಂದು ನಿರ್ದಿಷ್ಟ ಕಾಲಘಟ್ಟದ ಚಿಂತನೆಯಾಗಿ ಪರಿಕಲ್ಪಿಸಬೇಕಾಗುತ್ತದೆ. ಇದು ಕೃತಿಯ ವಿಶ್ಲೇಷಣೆಗೆ ಹೆಚ್ಚು ಉಪಯುಕ್ತವಾದ ಪರಿಕರಗಳನ್ನು ಒದಗಿಸಿಕೊಡುತ್ತದೆ. ಈ ಹಿನ್ನೆಲೆಯಲ್ಲಿ ಗ್ರಹಿಸಿದಾಗ ಪಾಶ್ಚಾತ್ಯರ ಸಂಪರ್ಕದಿಂದ ಭಾರತದಲ್ಲಿ ಹುಟ್ಟಿಕೊಂಡ ಹೊಸ ಎಚ್ಚರವು ರೂಪಿಸಿದ ಸುಧಾರಣಾವಾದಿ ವಿಚಾರಧಾರೆಯೇ ಈ ಕೃತಿಯ 'ಆಧುನಿಕ ಸತ್ವ'ವಾಗಿದೆ. ಅದ್ದರಿಂದಲೇ ಈ ಕೃತಿ ಸುಧಾರಣಾವಾದಿ ಚಿಂತನೆಯ ಬಹುಮುಖ್ಯ ವಿಷಯಗಳಾದ 'ಸ್ತ್ರೀ ಶಿಕ್ಷಣ' ಹಾಗೂ 'ಗೃಹಿಣಿ ಧರ್ಮ'ವನ್ನು ಮುಖ್ಯ ಭೂಮಿಕೆಯಾಗಿ ನಿರ್ಮಿಸಿಕೊಳ್ಳುತ್ತದೆ. ಕೃತಿಯ ಹೆಸರುಗಳೇ ಸೂಚಿಸುವಂತೆ 'ಸದ್ಗುಣೆ' ಎಂಬುದು 'ಉತ್ತಮ ಗೃಹಿಣಿ' ಎಂಬುದರ ಸಮಾನಾರ್ಥಕ ಪದವಾಗಿದೆ.

ಸದ್ಗುಣೆ ಕೃಷ್ಣಾಬಾಯಿ ಕಾದಂಬರಿ ಮೂಲಭೂತವಾಗಿ ಭಾರತದ ಆಧುನಿಕ ಕುಟುಂಬ ವ್ಯವಸ್ಥೆಯ ಹಿತಾಸಕ್ತಿಯನ್ನು ಊರ್ಜಿತಗೊಳಿಸಲು ಹುಟ್ಟಿಕೊಂಡ ಕೃತಿ. ಆಧುನಿಕ ಕುಟುಂಬದ ಪರಿಕಲ್ಪನೆಯಾದರೂ ಮೇಲುನೋಟಕ್ಕೆ ಸಾಂಪ್ರದಾಯಿಕತೆಗೆ ಎರವಾದುದೆನಿಸಿದರೂ ಆಳದಲ್ಲಿ ಸಾಂಪ್ರದಾಯಿಕ ಕುಟುಂಬದ ಮೌಲ್ಯಗಳನ್ನು ನಿರಾಕರಿಸದೇ ಅದರೊಳಗಿಂದಲೇ ಭಾರತೀಯ ಆಧುನಿಕ ಕುಟುಂಬಕ್ಕೆ ಅಗತ್ಯವಾದ ಸ್ತ್ರೀ ಮಾದರಿಯೊಂದನ್ನು ಕಟ್ಟಿಕೊಡುವ ಕೇಂದ್ರ ಆಶಯ ಈ ಕೃತಿಗಿದೆ. ಇಂತಹ ಕುಟುಂಬಗಳಿಗೆ ಸ್ತ್ರೀಯರ ಶಿಕ್ಷಣದ ಅಗತ್ಯ, ಕರ್ತೃತ್ವ ಶಕ್ತಿಯ ನೆಲೆ ಹಾಗೂ ದಾಂಪತ್ಯ ಜೀವನದ ಬಗ್ಗೆ ತನ್ನದೇ ಆದ ನಿಲುವೊಂದಿದೆ. ಆ ನಿಲುವನ್ನು ಪ್ರತಿಪಾದಿಸುವ ಸಲುವಾಗಿಯೇ ರೂಪುಗೊಂಡ ವೇದಿಕೆ ಕೃಷ್ಣಬಾಯಿಯ ಪಾತ್ರ ಹಾಗೂ ಕೌಟುಂಬಿಕ ವಿವರಗಳು.

ಕರ್ನಾಟಕ ಪ್ರಾಂತದ ಗ್ರಾಮದಿಂದ ಉದ್ಯೋಗದ ನಿಮಿತ್ತ ಪುಣೆಯಂತಹ ನಗರ ಸೇರಿದ ಕುಟುಂಬಗಳು ಕೃಷ್ಣಾಬಾಯಿಯ ತಂದೆ ಹಾಗೂ ಮಾವನ ಮನೆಗಳು. ಇಂತಹ ಒಂದು ಕುಟುಂಬದ ಹಿನ್ನೆಲೆಯಿಂದ ಬಂದ ನಾಯಕಿ ಇನ್ನೊಂದು ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸುವುದು ಪ್ರಸ್ತುತ ಕೃತಿಯ ಕಥಾ ವಿವರವಾಗಿದೆ. ನಡುವೆ ಸ್ತ್ರೀ ಶಿಕ್ಷಣದ ಪ್ರಾತ್ಯಕ್ಷಿಕೆಗಾಗಿ ಕೃಷ್ಣಾಬಾಯಿಯ ಅಕ್ಕನ ಕುಟುಂಬದ ವಿವರವನ್ನು ತಂದಿದ್ದು ಅದು ಕೃತಿಯಲ್ಲಿ ಸಿಂಹಪಾಲನ್ನು ಪಡೆದಿದೆ. ಭಾರತೀಯ ಸುಧಾರಣವಾದಿ ಚಿಂತನೆಯು ಕೈಗೆತ್ತಿಕೊಂಡ ಮುಖ್ಯ

ವಿಚಾರಗಳಲ್ಲಿ ಸ್ತ್ರೀ ಸುಧಾರಣೆಯು ಒಂದು. ಆಧುನಿಕ ಭಾರತೀಯ ಸ್ತ್ರೀಯ ಮಾದರಿಯೊಂದನ್ನು ರೂಪಿಸುವುದರಲ್ಲಿ ಆಸಕ್ತವಾದ ಸುಧಾರಣಾವಾದವು ಅದಕ್ಕಾಗಿ ಸ್ತ್ರೀ ಶಿಕ್ಷಣ, ಗೃಹಿಣೀಧರ್ಮ ಇತ್ಯಾದಿಗಳನ್ನು ಸುಧಾರಣೆಯ ಮುಖ್ಯಾಂಶವಾಗಿ ಭಾವಿಸಿ ಪುನಾರಚಿಸಲು ಯತ್ನಿಸಿತು. ಪ್ರಸ್ತುತ ಕೃತಿಯಾದರೂ ಆ ಅಂಶಗಳನ್ನೇ ಕೇಂದ್ರವಾಗಿಟ್ಟುಕೊಂಡು ತನ್ನ ಕಥಾರೂಪವನ್ನು ಸಿದ್ಧಪಡಿಸಿರುವುದರಿಂದ ಅವುಗಳನ್ನು ವಿವರಗಳಲ್ಲಿ ಪರಿಶೀಲಿಸುವ ಮೂಲಕವೇ ಕೃತಿಯ ಮೂಲದ್ರವ್ಯವನ್ನು ಕಂಡುಕೊಳ್ಳಬಹುದಾಗಿದೆ.

ಸ್ತ್ರೀ ಶಿಕ್ಷಣ : ಕೃಷ್ಣಾಬಾಯಿ ಕೃತಿ ರಚನೆಗೊಂಡ ಕಾಲದಲ್ಲಿ ಸ್ತ್ರೀ ಶಿಕ್ಷಣ ಕುರಿತಂತೆ ಮೂರು ವಿಚಾರಧಾರೆಗಳು ಮುಂಚೂಣಿಯಲ್ಲಿದ್ದವು. ಅವುಗಳೆಂದರೆ,

1. ಸ್ತ್ರೀ ಶಿಕ್ಷಣ ಅಗತ್ಯವಿಲ್ಲೆಂಬ ಸಾಂಪ್ರದಾಯಿಕ ವಿಚಾರಧಾರೆ
2. ಭಾರತೀಯ ಸ್ತ್ರೀಗೆ ಅಗತ್ಯವಾದ ಶಿಕ್ಷಣಬೇಕೆಂಬ ಸುಧಾರಣವಾದಿ ವಿಚಾರಧಾರೆ
3. ಪುರುಷರಿಗೆ ನೀಡುವ ಶಿಕ್ಷಣವನ್ನೇ ಸ್ತ್ರೀಯರಿಗೂ ನೀಡಬೇಕೆಂಬ ಸಮಾನತಾ ವಿಚಾರಧಾರೆ.

ಸುಧಾರಣಾವಾದವು ಸ್ತ್ರೀ ಶಿಕ್ಷಣದ ವಿಚಾರದಲ್ಲಿ ಸಾಂಪ್ರದಾಯಿಕ ವಿಚಾರಧಾರೆಗಿಂತ ಭಿನ್ನವಾದುದಾದರೂ ಅದು ತನ್ನದೇ ಆದ ಕೆಲವು ನಿರ್ದೇಶನಗಳೊಂದಿಗೆ ಸ್ತ್ರೀ ಶಿಕ್ಷಣವನ್ನು ಪ್ರೋತ್ಸಾಹಿಸುತ್ತದೆ. ಅದರ ಪ್ರಕಾರ ಹೆಣ್ಣುಮಕ್ಕಳ ಶಿಕ್ಷಣ ನೂರಕ್ಕೆ ನೂರರಷ್ಟು ಕುಟುಂಬ ಹಾಗೂ ಪತಿಯ ಕ್ಷೇಮ ಕೇಂದ್ರಿತವಾದುದು. ಚಾರಿತ್ರಿಕವಾಗಿ ನೋಡಿದಾಗ 1950ರ ನಂತರದ ಸಮಯವು ಸ್ತ್ರೀ ಶಿಕ್ಷಣ ಕುರಿತ ಬೇಕು ಬೇಡದ ಚರ್ಚೆಯ ಕಾಲಘಟ್ಟವಾದರೆ 1860-80ರ ಕಾಲವು ಪ್ರತ್ಯೇಕ ಸ್ತ್ರೀ ಶಾಲೆಗಳ ನಿರ್ಮಾಣದ ಕಾಲ. ಹಾಗೆ 1890ರ ಆಸುಪಾಸಿನ ಕಾಲವು ಸ್ತ್ರೀ ಶಿಕ್ಷಣದ ಪ್ರತ್ಯೇಕ ಪಠ್ಯಕ್ರಮದ ಬಗ್ಗೆ ವಿಶೇಷ ಚರ್ಚೆ ಆರಂಭಗೊಂಡ ಕಾಲ. ಅದರ ಫಲವಾಗಿ 1930-40ರ ಆಸುಪಾಸಿನಲ್ಲಿ ಸ್ತ್ರೀ ಶಿಕ್ಷಣದ ಪ್ರತ್ಯೇಕ ಪಠ್ಯವು ಕೆಲವು ಕಡೆ ಜಾರಿಗೆ ಬಂದು ನಂತರ ಹಿಂತೆಗೆದುಕೊಳ್ಳಲಾಯಿತು. ಈ ಚಾರಿತ್ರಿಕ ಬೆಳವಣಿಗೆಯನ್ನು ಗಮನಿಸಿದ್ದಾರೆ ಸದ್ಗುಣಿ ಕೃಷ್ಣಾಬಾಯಿ ಕೃತಿಯ ಸ್ತ್ರೀ ಶಿಕ್ಷಣದ ಪರಿಕಲ್ಪನೆಯ ಹಿಂದಿನ ತಾತ್ವಿಕತೆ ಸ್ಪಷ್ಟವಾಗುತ್ತದೆ.

ಪ್ರಸ್ತುತದ ಕೃತಿಯಲ್ಲಿ ಸ್ತ್ರೀ ಶಿಕ್ಷಣದ ಕುರಿತು ಅಳುಕನ್ನು ಹೊಂದಿರುವ ಕೃಷ್ಣಾಬಾಯಿ, ತಾಯಿ ರಾಧಾಬಾಯಿ ಹಾಗೂ ಅತ್ತೆ ರಮಾಬಾಯಿಯಂತಹ ಒಂದೆರಡು ಪಾತ್ರಗಳಿದ್ದರೂ ಅವು ದೊಡ್ಡ ಸವಾಲನ್ನೇನೂ ಒಡ್ಡದೆ ಸುಧಾರಣವಾದದ ವಾದ ಸರಣಿಯನ್ನು ಒಪ್ಪುತ್ತವೆ. ಸ್ತ್ರೀ ಶಿಕ್ಷಣದ ಬಗ್ಗೆ ಅಪಪ್ರಚಾರ ಮಾಡುವ ಗಂಗೂಬಾಯಿಯಂತಹ ಒಂದು ಪಾತ್ರವಿದ್ದರೂ ಅದು ಖಳನಾಯಕಿಯ ಸ್ಥಾನದಲ್ಲಿ ನಿಂತು. ಅವಮಾನಿತ-ಗೊಳ್ಳುತ್ತದೆ. ಇನ್ನುಳಿದಂತೆ ಇಡೀ ಕೃತಿ ಸುಧಾರಣವಾದಿ ಸ್ತ್ರೀ ಶಿಕ್ಷಣದ ಮಾದರಿ ಕೈಪಿಡಿಯಾಗಿದೆ. ಕೃಷ್ಣಾಬಾಯಿ ಪಾತ್ರ ಅದರ ಪ್ರಾತ್ಯಕ್ಷಿಕೆಯಂತಿದೆ.

ವಿಜಯಾದಬ್ಬೆ ಗುರುತಿಸಿರುವಂತೆ 'ಗಂಡಸರಂತೆ ಹೆಂಗಸರಾದರೂ ಮನುಷ್ಯರೇ ಇರುವರು. ಅವರಲ್ಲಿ ಸಹ ಬುದ್ಧಿಯೂ, ಕಲಿಯುವ ಶಕ್ತಿಯೂ ಗಂಡಸರಲ್ಲಿದ್ದಂತೆ ಇದ್ದೇ ಇರುತ್ತದೆ. ವಿದ್ಯೆಯಿಂದಾಗುವ ಲಾಭಗಳನ್ನು ಆನಂದಗಳನ್ನು ಪಡೆಯಬೇಕೆಂಬ ಲವಲವಿಕೆಯು ಅವರಲ್ಲಿಯು ಉಂಟು. ಜನಸಂಖ್ಯೆಯ ಅರ್ಧ ಸ್ತ್ರೀ ಭಾಗವನ್ನು ಜ್ಞಾನಾಂಧಕಾರ -ದಲ್ಲಿಡುವುದು ಯಾರಿಗೂ ಯೋಗ್ಯವೆನಿಸಲಾರವು (ಪು.10) ಎನ್ನುವಂತಹ ರೋಮಾಂಚಕಾರಿ ಮಾತು ಕೃತಿಯಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಅವು ಕೇವಲ ಆರಂಭಿಕ ಮಾತುಗಳಾಗಿದ್ದು, ಮುಂದುವರಿದಂತೆ ಭಿನ್ನ ಪಾತಳಿಯನ್ನು ತಲುಪುತ್ತವೆ. ಉದಾಹರಣೆಗೆ ಮೇಲಿನ ವಾಕ್ಯವೇ ಮುಂದುವರಿದಂತೆ, 'ಸ್ತ್ರೀಯರಿಗೆ ವಿದ್ಯೆ ಕಲಿಸುವುದರಿಂದ ಅವರು ತಮಗೆ ಬೇಕಾದ ಕಲೆಗಳನ್ನು ಕಲಿತು ತಮ್ಮ ಮಕ್ಕಳಿಗೆ ಅನೇಕ ಉಪಯುಕ್ತ ಶಿಕ್ಷಣಗಳನ್ನು ಮನೆಯಲ್ಲಿಯೇ ಕೊಡುವುದಲ್ಲದೆ, ಮನೆತನಗಳಲ್ಲಿ ಹಿರಿಯರಿಗೂ, ಪತಿಗೂ ಬೇಕಾದವರಾಗಿ, ಸನ್ಮಾರ್ಗದಿಂದ ನಡೆದು ಅವರನ್ನು ಸಂತೋಷಗೊಳಿಸಿ, ದೇಶದ ಉನ್ನತಿಗೆ ಸಹ ಕಾರಣವಾಗುತ್ತಾರಲ್ಲವೆ ? ಆದುದರಿಂದ ಕೃಷ್ಣಾಬಾಯಿಗೆ ಆಕೆಯ ತಾಯಿಯ ಅಣ್ಣನೂ ವಿದ್ಯೆ ಕಲಿಸಲು ಉದ್ಯುಕ್ತವಾದದ್ದು ಯೋಗ್ಯವೇ ಸರಿ' ಎಂದು ಮುಕ್ತಾಯಗೊಳ್ಳುತ್ತದೆ.

ಇಂಥದೇ ಇನ್ನೊಂದು ಪ್ರಸ್ತಾಪವನ್ನು ನೋಡುವುದಾದರೆ ಕೃಷ್ಣಾಬಾಯಿಯನ್ನು ಮದುವೆಯಾಗಬೇಕಾದಾಗ ಆಧುನಿಕ ಶಿಕ್ಷಣ ಪಡೆದ ಮಾಧವರಾಯನು ಕಲಿತ ಹೆಣ್ಣಿನ ಬಗ್ಗೆ ಇದ್ದ ತನ್ನ ತಂದೆ ತಾಯಿಯರ ಅನುಮಾನವನ್ನು ಪರಿಹರಿಸುವ ಮಾತುಗಳನ್ನು ಗಮನಿಸಬಹುದು.

'ಜ್ಞಾನವು ಎಲ್ಲ ಹೆಂಗಸರಿಗೂ ಗಂಡರಿಗೂ ಸರಿಯಾಗಿಯೇ ಅತ್ಯಗತ್ಯವಾದದ್ದು. ಜ್ಞಾನವೇ ಮನುಷ್ಯರಿಗೆ ಭೂಷಣವು. ವಿದ್ಯೆಯೇ ಎಲ್ಲ ಕಾರ್ಯಗಳಿಗೂ ಸಾಧಿನೀಭೂತವಾದದ್ದು. ವಿದ್ಯೆ ಕಲಿತ ಹೆಂಗಸರೇ ವಿದ್ಯೆ ಕಲಿತ ಗಂಡಸರ ಮನಸ್ಸಿಗೆ ತಮ್ಮ ಭಾಷಣ ಮುಂತಾದ್ದರಿಂದ ಆನಂದಪಡಿಸುವರಲ್ಲದೆ ಮೂಢ ಹೆಂಗಸರು ಪಡಿಸಲಾರರು. ವಿದ್ಯೆ ಕಲಿಯದ ಹೆಂಡಂದಿರು ಸುಶಿಕ್ಷಿತ ಗಂಡಂದಿರಿಗೆ, ಕೇವಲ ವಂಶಾಭಿವೃದ್ಧಿಯ ಕೆಲಸದಲ್ಲಿ ಮಾತ್ರ ಉಪಯೋಗವಾಗುವರು. ಸುಶಿಕ್ಷಿತ ಸ್ತ್ರೀಯರು ಮಕ್ಕಳಿಗೂ

ಗಂಡಂದಿರಿಗೂ ಗುರುಹಿರಿಯರಿಗೂ ಉಪಯುಕ್ತರಾಗಿ ದೇಶೋನ್ನತಿಗೆ ಸಹ ಕಾರಣವಾಗುತ್ತದೆ. ಕೆಲವು ವಿದ್ಯೆ ಕಲಿತವರು ನೀತಿವಂತರಾಗದಿದ್ದರೆ, ಅವರು ಪೂರ್ಣ ವಿದ್ಯಾಭ್ಯಾಸ ಮಾಡಿರುವದಿಲ್ಲೆಂದು ತಿಳಿಯತಕ್ಕದ್ದು. ಅಂಥವರ ಸ್ಥಿತಿಗೆ ಇತರ ಸಾಮಾಜಿಕ ಸ್ಥಿತಿಯು, ಹುಟ್ಟು ಗುಣಗಳೂ ಕಾರಣವಲ್ಲದೆ ವಿದ್ಯೆಯು ಎಂದೂ ಕಾರಣವೆನಿಸಲಾರದು. ಆದುದರಿಂದ ಕೃಷ್ಣೆಯು ವಿದ್ಯಾಭ್ಯಾಸ ಮಾಡಿರುವುದು ದೋಷವಲ್ಲದೆ, ಅದೊಂದು ಪ್ರಶಂಸನೀಯವಾದ ಗುಣವೇ ಆಗಿರುತ್ತದೆ' (ಪು.15) ಎನ್ನುವ ಮಾತುಗಳೂ ಕೂಡ ಆಧುನಿಕ ಸಂದರ್ಭವು ಸ್ತ್ರೀ ಶಿಕ್ಷಣವನ್ನು ಪರಿಭಾವಿಸಿದ ಕ್ರಮವನ್ನು ತೋರುತ್ತದೆ. ಆರಂಭಿಕ ಸಾಲುಗಳು ಲಿಂಗನಿರಪೇಕ್ಷವಾದ ವೈಚಾರಿಕ ನೆಲೆಯಲ್ಲಿದ್ದರೂ ನಂತರ ಅದು ಹೆಣ್ಣಿನ ಶಿಕ್ಷಣವನ್ನು ಪ್ರತ್ಯೇಕಿಸಿಕೊಂಡು ಅದರ ಗುರಿ ಗಂಡ, ಮಕ್ಕಳು, ಕುಟುಂಬ ಎಂಬ ಲಿಂಗ ವ್ಯತ್ಯಾಸದ ನೆಲೆಯಲ್ಲಿ ಪರ್ಯಾವಸಾನಗೊಳ್ಳುತ್ತದೆ.

ಮೇಲಿನ ಎರಡು ಹೇಳಿಕೆಗಳಲ್ಲದೆ ಇಡೀ ಕಾದಂಬರಿಯು ಪೋಷಿಸುವ ಕೃಷ್ಣಾಬಾಯಿಯ ಪಾತ್ರವು ಅದನ್ನೇ ಎರಕಹೊಯ್ದಂತಿದೆ. ಕುಟುಂಬದ ಒತ್ತಾಸೆಯೊಂದಿಗೆ ಆಧುನಿಕ ಶಿಕ್ಷಣ ಪಡೆದ ಕೃಷ್ಣಾಬಾಯಿ ಪ್ರಕೃತಿ ಪ್ರೇಮ, ಕಸೂತಿ ಇತ್ಯಾದಿಗಳಲ್ಲಿ ಅಭಿರುಚಿ ಬೆಳೆಸಿಕೊಳ್ಳುವುದರೊಂದಿಗೆ ಗೃಹಕೃತ್ಯ, ಸೇವಾಮನೋಭಾವ ಹಾಗೂ ಕುಟುಂಬ ನಿಷ್ಠೆಗಳ ವಿಚಾರದಲ್ಲಿಯು ಹೆಚ್ಚು ವಿಧೇಯಳಾಗಿರುತ್ತಾಳೆ. ತಾನು ಪಡೆದ ಶಿಕ್ಷಣದಿಂದಾಗಿಯೇ ತನ್ನ ಕರ್ತವ್ಯವನ್ನು ಸರಿಯಾಗಿ ಅಂದರೆ ಪಿತೃಪ್ರಧಾನತೆಗೆ ಅನುಗುಣವಾಗಿ ಗುರುತಿಸಿಕೊಳ್ಳಬಲ್ಲವಳಾಗುತ್ತಾಳೆ. ತಾಯಿಯ ಸಾವು ಹಾಗು ಅತ್ತೆಯ ಅನಾರೋಗ್ಯಗಳ ನಡುವೆ ತನ್ನ ಆಯ್ಕೆ ಯಾವುದಾಗಬೇಕು ? ಗಂಡನ ಹಾಗು ತನ್ನ ಶಿಕ್ಷಣದಲ್ಲಿ ಯಾವುದಕ್ಕೆ ಆದ್ಯತೆ ನೀಡಬೇಕು ? ಗಂಡನ ಪುರೋಭಿವೃದ್ಧಿಗಾಗಿ ತಾನು ಯಾವ ತ್ಯಾಗ ಮಾಡಬೇಕು ? ಇತ್ಯಾದಿ ಹಲವು ಸಂದಿಗ್ಧಗಳಲ್ಲಿ ಆಕೆಯ ಶಿಕ್ಷಣ ಅವಳಿಗೆ ಮಾರ್ಗದರ್ಶನ ಮಾಡಿದೆ. ತನ್ನ ಹಿತಾಸಕ್ತಿಗಿಂತ ತನ್ನ ಪತಿಯ ಹಾಗು ಪತಿಯ ಕುಟುಂಬದ ಹಿತಾಸಕ್ತಿ ಮುಖ್ಯವೆಂದು ತೀರ್ಮಾನಿಸುವ 'ಆಧುನಿಕ ವೈಚಾರಿಕತೆ'ಯನ್ನು ಒದಗಿಸಿದೆ. ಹೀಗೆ ಆಧುನಿಕ ಕಾಲಘಟ್ಟದ ಸ್ತ್ರೀ ಶಿಕ್ಷಣದ ಪರಿಕಲ್ಪನೆ ಕೃಷ್ಣಬಾಯಿಯಲ್ಲಿ ಯಥಾವತ್ತಾಗಿ ಮೈವೆತ್ತಿದೆ. ಅವಳು ತನ್ನ ಅಕ್ಕನ ಮಕ್ಕಳಿಗೆ ನೀಡಿದ ಈ ಶಿಕ್ಷಣವೇ ಆ ಮಕ್ಕಳ ಮದುವೆಯನ್ನು ಸುಸೂತ್ರಗೊಳಿಸಿದೆ. ಸ್ವೇಚ್ಛೆಯಿಂದಿದ್ದ ಯಶೋಧಾಬಾಯಿಯ ಮಗಳನ್ನು ತಂದುಕೊಳ್ಳಲು ಹಿಂಜರಿಯುತ್ತಿದ್ದವರು ಆ ಮಕ್ಕಳಿಗೆ ಕೃಷ್ಣಾಬಾಯಿ ಆಧುನಿಕ ಶಿಕ್ಷಣ ನೀಡಿದ್ದಾಳೆಂದು ಅರಿಯುತ್ತಲೇ ತನ್ನ ಮಗನಿಗೆ ತಂದುಕೊಳ್ಳಲು ನಿರ್ಧರಿಸುತ್ತಾರೆ. ಏಕೆಂದರೆ ಕೃಷ್ಣಾಬಾಯಿ ನೀಡಿದ ಆಧುನಿಕ ಶಿಕ್ಷಣ ಹೆಣ್ಣು ಮಕ್ಕಳ ವಿಧೇಯತೆಯ ಬಗ್ಗೆ ಭರವಸೆ ನೀಡುತ್ತದೆ. ಆಧುನಿಕ ಕುಟುಂಬದ ಹಿತಾಸಕ್ತಿಯನ್ನು ಊರ್ಜಿತಗೊಳಿಸುತ್ತದೆ.

**ಹೆಣ್ಣಿನ ಕರ್ತೃತ್ವಶಕ್ತಿ :** ಈ ಕೃತಿಯಲ್ಲಿ ಗಮನಿಸಬಹುದಾದ ಇನ್ನೊಂದು ಮುಖ್ಯವಿಚಾರ ಹೆಣ್ಣಿನ ಕರ್ತೃತ್ವ ಶಕ್ತಿಗೆ ಸಂಬಂಧಿಸಿದ್ದು. ಆಧುನಿಕತೆಯು ಪ್ರತಿಪಾದಿಸುವ ಹೆಣ್ಣಿನ ಕರ್ತೃತ್ವ ಶಕ್ತಿಯು ಗೃಹಿಣೀ ಧರ್ಮ ಕೇಂದ್ರಿತವಾದುದು. ಆಧುನಿಕ ಕುಟುಂಬಗಳ ಬೆನ್ನೆಲುಬಾದ ಗೃಹಿಣಿಯು ವಾಸ್ತವವಾಗಿ ಸ್ತ್ರೀ ಶಿಕ್ಷಣ ಹೊಂದಿ ರೂಪಾಂತರಗೊಂಡ ಪರಂಪರಾಗತ ಹದಿಬದೆಯೇ ಆಗಿರುತ್ತಾಳೆ. ಸಾಂಪ್ರದಾಯಿಕ ಸ್ತ್ರೀ ಮಾದರಿಗಿಂತ ಅವಳು ಭಿನ್ನಗೊಳ್ಳುವ ಪ್ರಮುಖ ಅಂಶಗಳೆಂದರೆ, ಮಕ್ಕಳಿಗೆ ತಾಯಿ ಮಾತ್ರವಾಗದೆ ಶಿಕ್ಷಕಿಯೂ ಆಗುವುದು, ಗಂಡನ ಪ್ರತಿನಿಧಿಯಾಗಿ ಅಗತ್ಯ ಸಂದರ್ಭದಲ್ಲಿ ಹೊರಗಿನ ಕೆಲಸವನ್ನು ನಿರ್ವಹಿಸುವುದು, ಆಧುನಿಕ ಪುರುಷನ ಆಶಯಕ್ಕೆ ಅನುಗುಣವಾಗಿ ತನ್ನನ್ನು ಆಧುನೀಕರಿಸಿಕೊಳ್ಳುವುದು ಇತ್ಯಾದಿಗಳಾಗಿವೆ. ಈ ಪಟ್ಟಿಯಲ್ಲಿ ಸೇರ್ಪಡೆಗೊಳ್ಳುವ ಇನ್ನೊಂದು ಪ್ರಮುಖ ಲಕ್ಷಣ ಗಂಡನು ತಪ್ಪಾದ ನಡೆ ನುಡಿಗಳನ್ನು ತೋರಿದಾಗ ಅದನ್ನು ತಿದ್ದುವ ಕೆಲಸವು ಆದರ್ಶ ಗೃಹಿಣಿಯದಾಗಿದೆ. ಆದರೆ ಅದು ಯಾವ ಕಾರಣಕ್ಕೂ ವಾಚ್ಯವಾದದ್ದು, ಸ್ತ್ರೀಯ ವಿವೇಚನಾಶಕ್ತಿ ಮೇಲೆಂಬುದನ್ನು ತೋರಿಸುವುದು, ಗಂಡನ ಪ್ರತಿಷ್ಠೆಗೆ ಕುಂದು ತರುವುದೂ ಆಗಿರಬಾರದು. ಹಾಗಾಗಿ ಈ ಕಲೆಯನ್ನು ಹೆಣ್ಣುಮಕ್ಕಳು ಅತಿಸೂಕ್ಷ್ಮವಾಗಿ ಕರಗತ ಮಾಡಿಕೊಳ್ಳಬೇಕು. ಈ ಸೂಕ್ಷ್ಮ ಸಂವೇದನೆಯನ್ನು ಆಧುನಿಕ ಶಿಕ್ಷಣ ಒದಗಿಸುತ್ತದೆ. ಅದಕ್ಕೊಂದು ಅತ್ಯುತ್ತಮ ಪ್ರಸಂಗವನ್ನು ಈ ಕತೆಯೇ ಕಲ್ಪಿಸಿಕೊಡುತ್ತದೆ.

ತಂದೆತಾಯಿಯರ ಮರಣಾನಂತರ ಸಂಕಷ್ಟಗಳಿಗೆ ಸಿಕ್ಕಿದ ಕೃಷ್ಣಾಬಾಯಿಯ ಗಂಡ ಮಾಧವರಾಯ ಮನೆಗೆ ತಡವಾಗಿ ಬರುತ್ತಾನೆ. ತಡವಾದದ್ದರ ಕಾರಣ ತಿಳಿಯದ ಬಗ್ಗೆ ಕೃಷ್ಣಬಾಯಿಗೆ ಆತಂಕ ಅಸಮಧಾನಗಳಿವೆ. ಆದರೆ ಅಂತಹ ಸನ್ನಿವೇಶವನ್ನು ಕೃಷ್ಣಾಬಾಯಿ ನಿಭಾಯಿಸುವ ಕ್ರಮವು ಪಿತೃಪ್ರಧಾನತೆ ಹೇಳುವ ಕಾಂತಸಂಹಿತಕ್ಕೊಂದು ಅತ್ಯುತ್ತಮ ಉದಾಹರಣೆಯಾಗಿದೆ. ಆಕೆ ಮಮತೆಯಿಂದ ಅವನ ಹತ್ತಿರ ಹೋಗಿ ಕುಳಿತು ಮೆಲ್ಲನೆ ತಡವಾದುದರ ಕಾರಣ ಕೇಳುತ್ತಾಳೆ. ಮಾಧವರಾಯನು ಉತ್ತರ ಕೊಡದಿರಲು ಈಗ ಮಾತ್ರ ಕೃಷ್ಣಾಬಾಯಿಯ ಸಮಾಧಾನ ವೃತ್ತಿಯು ಭಂಗವಾಗುತ್ತದೆ. ಆಗ ಆಕೆ ತನ್ನ ಪತಿಯ ಕಾಲ ಮೇಲೆ ಬಿದ್ದು "ಪ್ರಾಣನಾಥರೇ ನನ್ನಿಂದ ಏನು ಅಪರಾಧವಾಯಿತೆಂದು ಮಾತಾಡಲೊಲ್ಲಿರಿ. ಏನಾದರೂ ನನಗೆ ತಿಳಿಸದೆ ಘಟಿಸಿದ್ದರೆ ದಯಮಾಡಿ ಕ್ಷಮಿಸಿ ಈ ದಾಸಿಯನ್ನು ಉದ್ಧಾರಿಸಿರಿ" ಎಂದು ಹೇಳಿಕೊಂಡು ಅಳಹತ್ತಿದಳು.

ಮೇಲಿನ ಪ್ರಸಂಗವು ದಾಂಪತ್ಯದಲ್ಲಿ ಸ್ತ್ರೀ ತೋರಿಸಬೇಕಾದ ಪರಮಾವಧಿ ವಿಧೇಯತೆಯನ್ನು ನಿರೂಪಿಸುವುದಾಗಿದೆ. ತಪ್ಪು ಮಾಡಿಲ್ಲದಾಗ ಕೂಡ ಪೂರ್ವಭಾವಿಯಾಗಿ ತನ್ನನ್ನು ತಾನೇ ತಪ್ಪಿತಸ್ಥಳ ಸ್ಥಾನದಲ್ಲಿ ನಿಲ್ಲಿಸಿಕೊಂಡು ಗಂಡನ ಅಹಂನ್ನು ತಣಿಸುವ ಮೂಲಕ ಆತನನ್ನು ಹೊಂದಿಸಿಕೊಳ್ಳಬೇಕೆಂಬ ಅವಮಾನಕರವಾದ ಮೌಲ್ಯವೊಂದು ಇಲ್ಲಿದೆ. ಹೆಣ್ಣು ಈ ಬಗೆಯ ದಾಸ್ಯವನ್ನು, ಅಸಹಾಯಕತೆಯನ್ನು ತೋರಿದಾಗ ಗಂಡು ಅವಳನ್ನು ಹಿಡಿದೆತ್ತಿ, ಎದೆಗಪ್ಪಿ ನಿನ್ನದೇನು ತಪ್ಪಿಲ್ಲವೆಂದು ಸಂತೈಸುತ್ತಾನೆ.

ಈ ಕಾದಂಬರಿಯ ನಾಯಕಿ ಕೃಷ್ಣಾಬಾಯಿಯ ಕರ್ತೃತ್ವ ಶಕ್ತಿಯು ನೂರಕ್ಕೆ ನೂರು ಆಧುನಿಕ ಚಿಂತನಾ ಕ್ರಮದ ಗೃಹಿಣಿ ಮಾದರಿಯನ್ನು ಆವಿಷ್ಕಾರಿಸುವುದಕ್ಕೆ ಮುಡಿಪಾಗಿದೆ. ಆಕೆ ಶಿಕ್ಷಣದ ಬಗ್ಗೆ ಅಪಾರ ಆಸಕ್ತಿ ತೋರಿದರೂ ಅದನ್ನೆಂದು ವ್ಯಕ್ತಿಗತ ನೆಲೆಯಲ್ಲಿ ಪರಿಭಾವಿಸಲಾರಳು. ವಿದ್ಯೆ ಕಲಿತರು ಹಿರಿಯರಲ್ಲಿ ವಿನಯವನ್ನು, ಗಂಡನಲ್ಲಿ ಭಕ್ತಿಯನ್ನು ಶಂಕಿಸಲಾರಳು. ತನಗೆಲ್ಲಾ ಸ್ವಾತಂತ್ರ್ಯ ದೊರೆತಾಗಲೂ ಆಕೆ ಕುಟುಂಬದ ಹಿತಾಸಕ್ತಿಯಿಂದ ಕಿಂಚಿತ್ತು ಕದಲುವವಳಲ್ಲ. ತನ್ನನ್ನು ಕೇಂದ್ರದಲ್ಲಿಟ್ಟುಕೊಂಡು ಏನನ್ನೂ ಆಲೋಚಿಸಲಾರಳು. ಸಂಸಾರದ ಎಲ್ಲ ಜವಾಬ್ದಾರಿಗಳನ್ನು ನಿಭಾಯಿಸುವಾಗಲೂ ಕುಟುಂಬದ ಇತರ ಸದಸ್ಯರ ಅಭಿರುಚಿಗೆ ತನ್ನನ್ನು ಹೊಂದಿಸಿಕೊಳ್ಳುತ್ತಾಳೆ. ತಾನು ಹಗಲಿರುಳು ದುಡಿಯುತ್ತಲೇ ಗಂಡನು ವಿಶ್ರಾಂತಿ ಪಡೆಯುವ ಬಗ್ಗೆ ಯೋಚಿಸುತ್ತಾಳೆ. ಮನೆಯ ಆರ್ಥಿಕ ಸಂಕಷ್ಟವನ್ನು ಸರಿಪಡಿಸಲು ಆಳುಗಳನ್ನು ಬಿಡಿಸಿ ತಾನೇ ಆ ಜಾಗವನ್ನು ತುಂಬುತ್ತಾಳೆ. ಇಂತಹ ಆಧುನಿಕ ಸ್ತ್ರೀ ಒಂದು ವೇಳೆ ಕೌಟುಂಬಿಕ ಬದುಕಿನಿಂದ ಆತಂತ್ರಳಾದರೆ ಸಮಾಜಕ್ಕೆ ತನ್ನನ್ನು ಅರ್ಪಿಸಿಕೊಳ್ಳುವ ವಿಶ್ವಕುಟುಂಬಿಯಾಗುವಳು. ಅದರಂತೆ ಗಂಡನಿಂದ ಬೇರ್ಪಟ್ಟ ಕೃಷ್ಣಾಬಾಯಿಯಾದರೂ ತನಗೆ ಆಶ್ರಯವಿತ್ತ ಅಕ್ಕನ ಕುಟುಂಬಕ್ಕೆ ತನ್ನನ್ನು ಅರ್ಪಿಸಿಕೊಳ್ಳುತ್ತಾಳೆ. ಆ ಮೂಲಕ ಹೆಣ್ಣು ಅನುಕ್ಷಣವೂ ಪರರ ಚಿಂತೆ, ಪರರ ಸೇವೆಗೆ ಮುಡಿಪಾಗಿರಬೇಕೆಂಬ ಆದರ್ಶವನ್ನು ಇಲ್ಲಿ ಎತ್ತಿ ಹಿಡಿಯುತ್ತಾಳೆ.

ಆದರ್ಶ ಸ್ತ್ರೀ ಮಾಡುವ ಎಲ್ಲ ಸೇವೆಗಳೂ ಯಾವುದೇ ಪ್ರತಿಫಲಪೇಕ್ಷೆ ಇಲ್ಲದೆ ಮಾಡುವುದಾಗಿರಬೇಕು. ಆದ್ದರಿಂದಲೇ ಕೃಷ್ಣಾಬಾಯಿಗೆ ಹೆಣ್ಣು ಮಕ್ಕಳ ವಿರಾಮದ ಬಗ್ಗೆ, ವಿರಾಮದಲ್ಲಿನ ಹರಟೆ, ಗೆಳತಿಯರೊಂದಿಗಿನ ತಿರುಗಾಟ, ಕಾದಂಬರಿಯ ಓದು ಇತ್ಯಾದಿಗಳೆಲ್ಲ ವ್ಯರ್ಥಲಾಪ. ಕೊನೆಗೆ ಹರಿಕಥಾ ಶ್ರವಣದಂತಹ ಧಾರ್ಮಿಕ ಚಟುವಟಿಕೆಯೂ ಅನಗತ್ಯವಾದುದು. ಏಕೆಂದರೆ ಆಧುನಿಕ ಸ್ತ್ರೀಗೆ ಗೃಹಿಣಿಧರ್ಮವೇ ಧರ್ಮ, ಪತಿಯೇ ದೈವ. ಮನೆಯೇ ದೇವಾಲಯ. ಮನೆಯನ್ನು ಅಲಂಕರಿಸುವುದು, ಮಕ್ಕಳ ಲಾಲನೆ ಪಾಲನೆಯಲ್ಲಿ ಆನಂದ ಪಡುವುದು, ಅತ್ತೆ ಮಾವಂದಿರ ಶುಶ್ರೂಷೆ, ಪತಿಯ ಬೇಕು ಬೇಡಗಳ ನಿರ್ವಹಣೆ ಈ ಹೆಣ್ಣಿಗೆ ಧಾರ್ಮಿಕಾಚರಣೆಗಿಂತ ಮಿಗಿಲಾದುದು. ಹಾಗಾಗಿಯೇ ಬಿಡುವು, ಮನರಂಜನೆಗಳನ್ನು ಬಯಸುವ ಹೆಣ್ಣು ಒಳ್ಳೆಯ ಗೃಹಿಣಿಯಾಗಲಾರಳು. ಕುಟುಂಬದ ಹಿತಾಸಕ್ತಿಗೆ ಹೊರತಾದ ಅಭಿರುಚಿಗಳನ್ನು, ಚಟುವಟಿಕೆಗಳನ್ನು ಹೊಂದಿರುವವಳು ಮಾದರಿ ಸ್ತ್ರೀಯಾಗಲಾರಳು. ವೈಯಕ್ತಿಕತೆಯನ್ನು ಪ್ರದರ್ಶಿಸುವವಳು, ಸವಲತ್ತುಗಳನ್ನು ಆಶಿಸುವವಳು ಆದರ್ಶ ಸತಿಯಾಗಲಾರಳು. ಆದ್ದರಿಂದಲೇ ಕೃಷ್ಣಾಬಾಯಿಯ ಅಭಿರುಚಿಗಿಂತ ಭಿನ್ನವಾದ ಅಭಿರುಚಿ, ಆಲೋಚನೆ, ವರ್ತನೆಗಳುಳ್ಳ ಎಲ್ಲ ಸ್ತ್ರೀ ಪಾತ್ರಗಳೂ ಇಲ್ಲಿ ವಿಶ್ಲೇಷಣೆಗೊಳಪಡುತ್ತವೆ. ದುಂದುವೆಚ್ಚದ ಅತ್ತೆ, ವಿಧವೆಯಾದರೂ ನಿರ್ಭಿಡೆಯಿಂದ ಬದುಕುತ್ತಿರುವ ಅಕ್ಕನಂತಹ ಪಾತ್ರಗಳು 'ಖಳ'ದ ಸ್ಥಾನದಲ್ಲಿ ನಿಲ್ಲದಿದ್ದರೂ ಅನುಸರಣ ಯೋಗ್ಯ ಮಾದರಿಗಳಾಗುವುದಿಲ್ಲ. ಅಂತಹ ತ್ಯಾಜ್ಯಮಾದರಿಗಳನ್ನು ಕೃಷ್ಣಾಬಾಯಿ ತನ್ನ ನಡೆ ನುಡಿಯ ಮೂಲಕ ತಿದ್ದುತ್ತಾಳೆ. ಇದೇ ಅವಳ ಕರ್ತೃತ್ವ ಶಕ್ತಿ. ಉಳಿದಂತೆ ಆಕೆ ಪಿತೃಪ್ರಧಾನತೆಯ ಯಾವ ಮೌಲ್ಯಗಳನ್ನೂ ಮೀರಿ ತನ್ನ ಕರ್ತೃತ್ವಶಕ್ತಿಯನ್ನು ತೋರುವುದಿಲ್ಲ. ಒಂದೇ ವಾಕ್ಯದಲ್ಲಿ ಹೇಳುವುದಾದರೆ ಕೃಷ್ಣಾಬಾಯಿಯ ಕರ್ತೃತ್ವಶಕ್ತಿ ಸಾರಾಸಗಟಾಗಿ ಆಧುನಿಕ ಪಿತೃಪ್ರಧಾನತೆಯ ಹಿತಾಸಕ್ತಿಗೆ ಮೀಸಲಾದುದು. ಈ ಬಗೆಯ ಕರ್ತೃತ್ವಶಕ್ತಿಯನ್ನು ದಬ್ಬೆಯವರು ವಿಶ್ಲೇಷಿಸುವಂತೆ "ಇಡೀ ಕಥೆ ನಮಗೆ ಕಾಣಿಸುವುದು ಕೇವಲ ವಿಧೇಯಳಾದ, ದನಿಯಿಲ್ಲದ ಒಬ್ಬ ನಾಯಕಿಯನ್ನಲ್ಲ. ಬದಲಿಗೆ ತನ್ನ ಮತ್ತು ತನ್ನ ಸುತ್ತಲಿನವರ ಬದುಕಿನ ಗತಿಗಳನ್ನೇ ಬದಲಿಸಬಲ್ಲಂಥ, ರೂಪಿಸಬಲ್ಲಂಥ ಸಂಕಲ್ಪಶಕ್ತಿ, ಕರ್ತೃತ್ವಶಕ್ತಿ ಹೊಂದಿದ ಕೃಷ್ಣಾಬಾಯಿಯನ್ನು ನಾವಿಲ್ಲಿ ಕಾಣುತ್ತೇವೆ" ಎಂಬ ರೀತಿಯಲ್ಲಿ ಸ್ವೀಕರಿಸಲು ಸಾಧ್ಯವಾಗುವುದೇ ಎಂಬುದನ್ನು ಮರು ಪರಿಶೀಲಿಸಬೇಕಿದೆ. ಏಕೆಂದರೆ ಈ ಬಗೆಯಲ್ಲಿ ಪಿತೃಪ್ರಧಾನತೆಗೆ ತನ್ನನ್ನು ಸಮರ್ಪಿಸಿಕೊಂಡ ಹೆಣ್ಣಿನ ಕರ್ತೃತ್ವಶಕ್ತಿಯನ್ನು ನಾವು ಪರಂಪರೆಯುದ್ದಕ್ಕೂ ಕಾಣಬಹುದು. ಆ ಸಾಂಪ್ರದಾಯಿಕ ಸತೀ ಪಾತ್ರಗಳಿಗಿಂತ ಕೃಷ್ಣಾಬಾಯಿಯಲ್ಲಿರುವ ಒಂದು ವ್ಯತ್ಯಾಸವೆಂದರೆ ಈಕೆ ಆಧುನಿಕ ಸಂದರ್ಭದ ಪಿತೃಪ್ರಧಾನತೆಯ ಆಶೋತ್ತರಗಳಿಗೆ ತೆರೆದುಕೊಂಡವಳಷ್ಟೆ ಎಂಬುದು. ಈ ಆಧುನಿಕತೆ ಖಂಡಿತವಾಗಿಯೂ ಸಾಂಪ್ರದಾಯಿಕತೆಗಿಂತ ಭಿನ್ನವಾದುದಾದರೂ ಅದು ಸ್ತ್ರೀವಾದವು ಪರಿಭಾವಿಸುವ ಕರ್ತೃತ್ವವನ್ನು ಆಧರಿಸಿದ್ದಲ್ಲ.

**ದಾಂಪತ್ಯದ ಪುರೋಗಾಮಿ ದೃಷ್ಟಿಕೋನ :** ಭಾರ್ಯಾ

ಭರ್ತ.... ಎಂಬ ಮನುವಿನ ಉಕ್ತಿ ಈ ಕಾದಂಬರಿಯ ಹಿಂದಿನ ತಾತ್ವಿಕತೆಯನ್ನು ರೂಪಿಸಿದೆ ಎಂಬ ವಿಚಾರವು ಆಧುನಿಕ ಚಿಂತನಾಕ್ರಮದ ಬೇರುಗಳು ಎಲ್ಲಿವೆ ಎಂಬುದನ್ನು ಸೂಚಿಸುತ್ತವೆ. ಆದರೆ ಸುಧಾರಣಾವಾದದ ಆಶಯವನ್ನು ಮೀರಿ ಪರಂಪರೆ ಹಾಗೂ ಆಧುನಿಕತೆಗಳ ನಡುವೆ ಬಿಕ್ಕಟ್ಟೊಂದು ಇರುವುದನ್ನು ಕಾದಂಬರಿಕಾರ್ತಿ ತನಗರಿವಿಲ್ಲದೆ ದಾಖಲಿಸುತ್ತಾರೆ. ಮನುವಿನ ಉಕ್ತಿಯನ್ನು ಆಧರಿಸಿ ಕಥಾನಕವನ್ನು ಬೆಳೆಸುತ್ತಲೇ "ಕೆಲವು ಸ್ಮೃತಿಕಾರರು ಮಾತ್ರ ಹೆಂಗಸರು ಅಬಲೆಯರು ಇರುವುದರಿಂದ ಅವರು ಸ್ವಾತಂತ್ರ್ಯಕ್ಕೆ ಅನರ್ಹರೆಂತಲೂ ಕೇವಲ ಗಂಡಂದಿರು ಹೇಳಿದಷ್ಟು ಕೇಳಿಕೊಂಡು, ಅವರ ಮಾತನ್ನು ಮೀರದೆ ಗೃಹವ್ಯವಸ್ಥೆಯನ್ನು ಮಾಡತಕ್ಕದ್ದಲ್ಲದೆ ಯಾವ ವಿದ್ಯೆಯನ್ನು ಅವರು ಕಲಿಯತಕ್ಕದ್ದಲ್ಲೆಂತಲೂ ಹೇಳುತ್ತಾರೆ" (ಪು.9) ಎನ್ನುತ್ತಾರೆ. ಈ ಮಾತುಗಳು ಮನುವಿನತ್ತಲೇ ನಮ್ಮನ್ನು ಕರೆದೊಯ್ಯುತ್ತವೆ. ಆದರೆ ಲೇಖಕಿಯ ಇಷ್ಟು ತೀಕ್ಷ್ಣವಾದ ಪ್ರತಿಕ್ರಿಯೆಯಾದರು ಮುಂದುವರಿದು ಕುಟುಂಬ ಹಿತಾಸಕ್ತಿಯನ್ನೆ ಸೇರುವುದಾಗಿದೆ.

ಭಾರತದ ಆಧುನಿಕ ಕುಟುಂಬ ವ್ಯವಸ್ಥೆಯು ಸ್ತ್ರೀಶಿಕ್ಷಣ, ಗಂಡ ಹೆಂಡಿರಲ್ಲಿ ಪರಸ್ಪರ ನಿಷ್ಠೆ, ಪ್ರಾಪ್ತವಯಸ್ಸಿನ ವಿವಾಹ, ಸ್ತ್ರೀಯರ ಮನೆಯ ಹೊರಗಿನ ಪ್ರವೇಶ ಇತ್ಯಾದಿಗಳ ಬಗ್ಗೆ ಉದಾರವಾದ ಧೋರಣೆ ಇತ್ಯಾದಿಗಳನ್ನು ಹೊಂದ್ದಿರೂ ಸ್ತ್ರೀ ಪುರುಷರ ಸ್ಥಾನಮಾನದ ವಿಚಾರದಲ್ಲಿ ಅದು ತರತಮದಲ್ಲಿದ್ದುದೇ ಆಗಿದೆ. ಈ ಚಿಂತನೆ ಪ್ರತಿಪಾದಿಸುವ ಗೃಹಿಣೀ ಧರ್ಮ, ಪತಿವ್ರತಾಧರ್ಮದ ರೂಪಾಂತರ ಮಾತ್ರವಾಗಿದೆ. ಸಾಂಪ್ರದಾಯಿಕತೆಯು ಶಕತ್ವದಿಂದ ಸ್ತ್ರೀಯ ಮೇಲೆ ಹೇರುತ್ತಿದ್ದ ದಾಸ್ಯವನ್ನು ಬಳಸುಮಾರ್ಗದಲ್ಲಿ ಹೇರುವ ಕ್ರಮ ಇದಾಗಿದ್ದು, ಸೂಕ್ಷ್ಮವಾಗಿ ನೋಡಿದರೆ ಇದು ಅತ್ಯಂತ ಅಪಾಯಕಾರಿಯಾದ ಪ್ರಮಾಣದಲ್ಲಿಯೇ ದಾಸ್ಯವನ್ನು ಹೇರುತ್ತದೆ ಹಾಗೂ ಸ್ತ್ರೀ ಇದನ್ನು ಸ್ವ ಇಚ್ಛೆಯಿಂದ ಸ್ವೀಕರಿಸುವಂತಹ ವಾತಾವರಣವನ್ನು ನಿರ್ಮಿಸುತ್ತದೆ. ಉದಾ. ಸ್ತ್ರೀ ಶಿಕ್ಷಿತಳೂ ಆಗಬೇಕು. ಆದರೆ ತನ್ನ ವ್ಯಕ್ತಿ ವಿಶಿಷ್ಟತೆಯನ್ನು ಬೆಳೆಸಿಕೊಳ್ಳಬಾರದು. ಮಕ್ಕಳ ಜನನ, ಪಾಲನೆಗಳಿಗೆ ಸಾಂಪ್ರದಾಯಿಕ ಸಮಾಜದಲ್ಲಿ ಮುಗಿಯಬಹುದಾದ ಜವಾಬ್ದಾರಿಯನ್ನು ಶಿಕ್ಷಣದವರೆಗೂ ಮುಂದುವರಿಸಬೇಕು ಇತ್ಯಾದಿ ಅಧಿಕಗೊಂಡ ಒತ್ತಡಗಳು ಇಲ್ಲಿವೆ. ತನ್ನ ಶಕ್ತಿ ಮೀರಿ ದುಡಿಯುತ್ತಿರುವಾಗಲೂ ತನ್ನನ್ನು ಕೇವಲ ಪುರುಷನ ಅರ್ಧಾಂಗಿಯಾಗಿ ಮಾತ್ರ ಪರಿಭಾವಿಸಬೇಕು. ಅದರಾಚೆಗಿನ ಪೂರ್ಣತ್ವದ ಕನಸು ಕಾಣಬಾರದು ಎಂಬ ನೈತಿಕತೆಯನ್ನು ತುಂಬುತ್ತದೆ. ಹೀಗೆ ಮೌಲ್ಯ ಹಾಗೂ ಕ್ರಿಯೆಗಳ ಎರಡು ನೆಲೆಯಲ್ಲಿ ಆಧುನಿಕ ಸ್ತ್ರೀಯನ್ನು ಪ್ರಭಾವಿಸುವ ಮಹೋದ್ದೇಶದೊಂದಿಗೆ 'ಸದ್ಗುಣಿ ಕೃಷ್ಣಾಬಾಯಿ' ರೂಪುಗೊಂಡಿದೆ.

ಕೃಷ್ಣಾಬಾಯಿ ಕೃತಿಯನ್ನು ಯಾವ ದಿಕ್ಕಿನಿಂದ ಪರಿಶೀಲಿಸಿದರೂ ಅದು ಸುಧಾರಣವಾದಿಗಳ ಚಿಂತನಾಕ್ರಮವನ್ನು ಬಿಟ್ಟು ಒಂದಿಷ್ಟೂ ಆಚೆಗೆ ಸರಿಯುವುದಿಲ್ಲ. ಅಷ್ಟಾಗಿಯೂ ಈ ಕೃತಿಯ ಸಂದರ್ಭದಲ್ಲಿ ಕುತೂಹಲಕಾರಿಯಾದ ಒಂದು ಅಂಶವೆಂದರೆ ಇದು ವಿಧವಾ ವಿಷಯ ಕೇಂದ್ರಿತವಾದ ಕೃತಿಯಲ್ಲದಿರುವುದು. ಅಷ್ಟೇ ಏಕೆ ವಿಧವಾ ವಿಚಾರವನ್ನು ಒಂದು ಸಮಸ್ಯೆಯಾಗಿ ಕೂಡ ಈ ಕಾದಂಬರಿ ಎಲ್ಲಿಯು ಪ್ರಸ್ತಾಪಿಸುವುದಿಲ್ಲ. ವಿಧವೆಯರಾದ ಯಶೋಧಾಬಾಯಿ ಹಾಗೂ ಗಂಗೂಬಾಯಿಯ ಪಾತ್ರಗಳು ಅಸಹಾಯಕ ಪಾತ್ರಗಳಿಗೆ ಬದಲಾಗಿ ಉದ್ಧಟ ಪಾತ್ರಗಳಾಗಿ ಇಲ್ಲಿ ಪಾಠ ಕಲಿಯುತ್ತವೆ. ಇದು ಸುಧಾರಣಾವಾದಿ ಕಾಲಘಟ್ಟದ ಕನ್ನಡ ಕಾದಂಬರಿಗಳು ವಿಧವಾ ಸಮಸ್ಯೆಯನ್ನು ಕೇಂದ್ರೀಕರಿಸಿಕೊಂಡ ರೀತಿಯ ಮುಂದೆ ಗಮನಾರ್ಹವಾದುದಾಗಿದೆ.

ಶಾಂತಾಬಾಯಿಯವರು ತಮ್ಮ ಕಾಲದ ಹೊಸದೆನ್ನುವ ಚಿಂತನಾ ಕ್ರಮಕ್ಕೆ ತನ್ನನ್ನು ಬಿಚ್ಚು ಮನಸ್ಸಿನಿಂದ ತೆರೆದುಕೊಂಡಿದ್ದಾರೆ. ಅದರ ಒಂದೊಂದು ವಿಚಾರವನ್ನು ತಮ್ಮ ಕೃತಿಯಲ್ಲಿ ಆವಾಹಿಸಿಕೊಂಡಿದ್ದಾರೆ. ಇದರ ಆವಾಹನೆ ಎಷ್ಟರಮಟ್ಟಿನದೆಂದರೆ ಲೇಖಕಿ ತಾನೊಂದು ಕಾದಂಬರಿ ಬರೆಯುತ್ತಲೇ ಹೆಣ್ಣುಮಕ್ಕಳು ಕಾದಂಬರಿ ಓದುವುದನ್ನು ನಿರಾಕರಿಸಿ ಬಿಡುತ್ತಾರೆ. ಈ ಅರ್ಥದಲ್ಲಿ ಶಾಂತಾಬಾಯಿ ನೀಲಗಾರರು ತಮ್ಮ ಕಾಲಕ್ಕೆ ಗಮನಾರ್ಹವೆನ್ನಿಸುವ ನೆಲೆಯಲ್ಲಿ ತಮ್ಮ ಕರ್ತೃತ್ವಶಕ್ತಿ ತೋರಿದ್ದಾರೆ. ಅದಕ್ಕೆ ನಾವಿಂದು ಗೌರವ ತೋರಲೇಬೇಕು. ಸದ್ಗುಣಿ ಕೃಷ್ಣಾಬಾಯಿ ಕೃತಿ ಕನ್ನಡದ ಮಹಿಳಾ ಸಾಹಿತ್ಯ ಪರಂಪರೆಯ ದೃಷ್ಟಿಯಿಂದ ಮಹತ್ವಪೂರ್ಣದಾಖಲೆ. ಆದರೆ ಸ್ತ್ರೀವಾದಿ ರಾಜಕೀಯದ ದೃಷ್ಟಿಯಿಂದ ಸುಧಾರಣವಾದಕ್ಕೆ ತನ್ನನ್ನು ತೆತ್ತುಕೊಂಡ ಕೃತಿ. ಹಾಗಾಗಿ ಸ್ತ್ರೀವಾದಿ ಚಿಂತನೆ ಸುಧಾರಣವಾದದ ಸಂದರ್ಭದಲ್ಲಿ ಎತ್ತಬಹುದಾದ ಎಲ್ಲ ತಾತ್ವಿಕ ತಕರಾರುಗಳನ್ನು ಈ ಕೃತಿ ಎದುರಿಸಬೇಕಾಗುತ್ತದೆ. ಏಕೆಂದರೆ ಮಹಿಳಾ ಸಾಹಿತ್ಯ ಪರಂಪರೆಯ ಶೋಧವು ಐತಿಹಾಸಿಕ ಹಿರಿಮೆಯೊಂದನ್ನು ಮಾತ್ರ ಆಧರಿಸಿದ್ದಲ್ಲ. ಪ್ರಸ್ತುತದ ರಾಜಕಾರಣವನ್ನೂ ಗಮನದಲ್ಲಿಟ್ಟು ಕೊಂಡದ್ದು. ಈ ಗೌರವ ಪೂರ್ವಕವಾದ ಭಿನ್ನಮತವನ್ನು ಆಧುನಿಕ ಕನ್ನಡದ ಮೊದಲ ಲೇಖಕಿ ಸ್ವೀಕರಿಸುವುದು ಅನಿವಾರ್ಯ.

ಡಾ.ಎಂ.ಉಷಾ

# ಮುಸ್ಸಂಜೆಯ ಕಥಾ ಪ್ರಸಂಗ - ಒಂದು ಅನ್ನಿಸಿಕೆ

ನವೆಂಬರ್ 8, 2005 ರ ಮಂಗಳವಾರ ರವೀಂದ್ರ ಕಲಾ ಕ್ಷೇತ್ರದಲ್ಲಿ ಮುಸ್ಸಂಜೆಯ ಕಥಾ ಪ್ರಸಂಗದ ರಂಗ ಪ್ರಯೋಗ ನಡೆಯಿತು. ಈ ರಂಗಪ್ರಯೋಗದಲ್ಲಿನ ನೈಜತೆ ಹಾಗೂ ಕ್ರಿಯಾಶೀಲತೆ ರಂಗಾಸಕ್ತರನ್ನು ನಾಟಕದುದ್ದಕ್ಕೂ ಹಿಡಿದಿಡುವಲ್ಲಿ ಯಶಸ್ವಿಯಾಯಿತು.

ನಾಟಕದ ಜೀವಾಳ ಆಣೆ ಬಡ್ಡಿ ರಂಗವ್ವನ ಭಾಷ ಪ್ರಯೋಗ. ಗಂಡನಿಲ್ಲದ ವಿಧವೆ ಆಣೆ ಬಡ್ಡಿ ರಂಗವ್ವನ ಜೀವನದ ಆರ್ಥಿಕ ಮೂಲ ಹಾಲು ಮಾರಾಟ ಹಾಗೂ ಆಣೆ ಬಡ್ಡಿ ವ್ಯವಹಾರ. ಬಡ್ಡಿಗೆ ಹಣ ಇಸಿದುಕೊಂಡವರು ಒಂಟಿ ಹೆಂಗಸು ರಂಗವ್ವನ ತಲೆ ಮೇಲೆ ಕೈ ಯಾಡುವವರೇ ಹೆಚ್ಚು. ಆಕೆಯ ಭಾಷೆಯ ನಿರ್ಭಿಡೆಗೆ, ಬಾಯಿಗೆ ಹೆದರಿ ಕಂಗಾಲಾಗಿ ಹಣ ಹಿಂದಿರುಗಿಸುವಂತಹ ಭರ್ಮನಂತಹ ಮಂದಿಯೇ ಸುತ್ತ-ಮುತ್ತ. ಸ್ತ್ರೀ-ಪಾತ್ರಗಳನ್ನು ಕೇಂದ್ರದಲ್ಲಿ ಹೊಂದಿರುವ ಮುಸ್ಸಂಜೆಯ ಕಥಾ ಪ್ರಸಂಗ ಆಣೆ ಬಡ್ಡಿ ರಂಗವ್ವನ ಮೂಲಕ ಹಲವು ಆಯಾಮುಗಳನ್ನು ಒಳಗೊಳ್ಳುತ್ತದೆ. ಈಕೆಯ ಮಗಳು ಸಾವಂತ್ರಿಯ ಪ್ರೇಮ ಪ್ರಕರಣದ ಮೂಲಕ ಜಾತೀಯತೆಯ ಒಳ ಸುಳಿಯ ವ್ಯಕ್ತಿತ್ವಗಳು ಬಿಚ್ಚಿಕೊಳ್ಳುತ್ತವೆ. ಒಂದು ಕಡೆ ಬಡ್ಡಿ ವ್ಯವಹಾರ, ಇನ್ನೊಂದಡೆ ಯೌವ್ವನದ ಹೊಸ್ತಿಲಲ್ಲಿರುವ ಮಗಳು ಸಾವಂತ್ರಿ. ಎರಡನ್ನು ನಿಭಾಯಿಸುವಲ್ಲಿ ಆಕೆ ಬಳಸುವ ತಂತ್ರವೇ ಬಾಯಿ. ಬಯ್ಗಳೇ ಅವಳ ಅಸ್ತ್ರ. ಪುರುಷ ಪ್ರಧಾನ ಮೌಲ್ಯಗಳನ್ನು ರೂಢಿಸಿಕೊಂಡ ಆ ಹಳ್ಳಿಯಲ್ಲಿ ಆಕೆ ಜೀವಿಸಬೇಕೆಂದರೆ ಆಕೆಯ ಬಾಯಿ ಆಕೆಗೆ ಅನಿವಾರ್ಯ. ಲಂಕೇಶರ ಕಾದಂಬರಿಯ ಜೀವಾಳ ಪಾತ್ರವಾದ ಆಣೆ ಬಡ್ಡಿ ರಂಗವ್ವನ ಪಾತ್ರವನ್ನು ಸಶಕ್ತವಾಗಿ ಮೂಡಿಸಿದ್ದಾರೆ ವೈ.ಎನ್. ಉಮಾ. ಆದರೆ ಒಂದೇ ದಾಟಿ ಕೆಲವೊಮ್ಮೆ ಬೋರ್ ಹೊಡೆಸುತ್ತದೆ.

ಸಾವಂತ್ರಿಯ ಸೈಕಲ್ ಪ್ರೇಮ ಪ್ರಕರಣ ಮನೋರಂಜನೀಯ -ವಾಗಿತ್ತು. ಕೆಲವು ದೃಶ್ಯಗಳು ಅನಾವಶ್ಯಕವಾಗಿದ್ದವು ಕೂಡಾ. ಸಾವಂತ್ರಿ ಪಾತ್ರಧಾರಿ ರಂಜಿತಾ ಅಭಿನಯ ಪರವಾಗಿಲ್ಲ ಎನ್ನಿಸಿತು. ಬೇಡರ ಮಂಜನಾಗಿ ಪೆದ್ದುತನ, ಆತ್ಮವಿಶ್ವಾಸ ತೋರಿಸುವ ರೀತಿಗಳು ಕೂಡಾ ಗುಬ್ಬಿ ಶಿವಕುಮಾರ್‌ರವರಲ್ಲಿ ಒಳ್ಳೆಯ ಅಭಿವ್ಯಕ್ತಿ ಪಡೆದವು.

'ಮುಸ್ಸಂಜೆಯ ಕಥಾ ಪ್ರಸಂಗ' ಕಾದಂಬರಿಯ ಒಳಹರವುಗಳಾದ ಜಾತಿ, ಪ್ರೀತಿ, ಕಾಮ, ಪ್ರೇಮ ಇವುಗಳನ್ನು ರಂಗ ಪ್ರಯೋಗದಲ್ಲಿ ಸೂಕ್ಷ್ಮವಾಗಿ ಹಿಡಿಯಲಾಗಿದೆ. ಬೆಳಕು ಹಾಗೂ ಸಂಗೀತವನ್ನು ಇಡೀ ನಾಟಕದಲ್ಲಿ ಎಲ್ಲಿಯೂ ಯಶಸ್ವಿಯಾಗಿ ಬಳಸಿಕೊಳ್ಳಲಾಗಿಲ್ಲ. ನಿರೂಪಣೆಯಿಂದ ಕಥಾಭಾಗದ ಮುಂದುವರಿಕೆಗೆ ಕೊಂಡಿ ಹಾಕುತ್ತಿದ್ದುದು ನೀರಸವಾಗಿತ್ತು.

ಸಾವಂತ್ರಿ, ಆಣೆ ಬಡ್ಡಿ ರಂಗವ್ವ, ರಾಮಿ, ಮಮ್ತಾಜ್ ಪಾತ್ರಗಳಲ್ಲಿನ ಜೀವಂತಿಕೆ ಸ್ತ್ರೀವಾದಿ ಬದುಕಿನ ನೆಲೆಗಳನ್ನು ತೆರೆದು ತೋರಿಸುವಲ್ಲಿ ಯಶಸ್ವಿಯಾದವು. ಆದರೆ ರಾಮಿ ಹಾಗೂ ಮಮ್ತಾಜ್ ಪಾತ್ರಧಾರಿಗಳ ಅಭಿನಯ ತೀರಾ ಸಪ್ಪೆಯೆನಿಸಿತು. ಸಂಭಾಷಣೆ ಹೇಳುವ ರೀತಿಗಳು ಪಾತ್ರಗಳ ಗಟ್ಟಿತನವನ್ನು ಬಿಚ್ಚಿಡುವಂತಿರಲಿಲ್ಲ. ಮಮ್ತಾಜ್, ಆಕೆಯ ಗಂಡ, ರಂಗವ್ವ, ರಂಗವ್ವನ ತಮ್ಮ ಇವರ ಒಟ್ಟು ಸನ್ನಿವೇಶದ ಸಂಭಾಷಣೆಯಲ್ಲಿ ಆಗಾಗ್ಗೆ ಮರೆವು, ತೊಡರುಗಳು ಉಂಟಾಗಿದ್ದು ಸ್ಪಷ್ಟವಾಗಿ ಮುಜುಗರ ಉಂಟು ಮಾಡಿದವು. ಮಮ್ತಾಜ್ ಪಾತ್ರದ ಗಟ್ಟಿತನ ಬೆರಗುಗೊಳಿಸುವಂಹುದಾಗಿದೆ.

'ಮುಸ್ಸಂಜೆಯ ಕಥಾ ಪ್ರಸಂಗ'ದ ರಂಗ ಪ್ರದರ್ಶನ ಮತ್ತೊಮ್ಮೆ ಕಾದಂಬರಿಯನ್ನು ನೆನಪಿಸಿದೆ. ಕಾದಂಬರಿಯ ಒಳ ಹರವುಗಳು ವಿಸ್ಮಯ ಹುಟ್ಟಿಸುವುದನ್ನು ಮತ್ತೊಮ್ಮೆ ನೆನಪಿಸಿಕೊಳ್ಳು-ವಂತಾಗುತ್ತದೆ. ಅಷ್ಟು ದೊಡ್ಡದಾದ ಹರವಿನ ಕಾದಂಬರಿಯನ್ನು ಪ್ರೇಕ್ಷಕರನ್ನು ಹಿಡಿದಿಡಿಸುವಷ್ಟರ ಮಟ್ಟಿಗೆ ನಿರ್ದೇಶಿಸಿದ ಕೆ.ಎಸ್.ಡಿ.ಎಲ್. ಚಂದ್ರು ಹಾಗೂ ನಾಟಕ ತಂಡದವರು ಅಭಿನಂದನಾರ್ಹರು.

**ಚಂಪಾವತಿ. ಎಚ್.ಎಸ್.**

ಖುಷ್ಬೂ ನಂತಹ ಮಹಿಳೆ - ಮಹಿಳಾ ಲೈಂಗಿಕ ಸ್ವಾತಂತ್ರ್ಯದ ಬಗ್ಗೆ ಮಾತನಾಡಿದುದೇ ಮಹಾಪರಾಧ ಎನ್ನುವಂತೆ ಆಕೆಯನ್ನು ನ್ಯಾಯಾಲಯದ ಮೆಟ್ಟಿಲು ಹತ್ತುವಂತೆ ಮಾಡಲಾಗಿದೆ. ಕ್ಷಮೆ ಕೇಳುವಂತೆ ಕೂಡಾ ಒತ್ತಾಯಿಸಲಾಗುತ್ತಿದೆ. ಖುಷ್ಬೂಗೆ ಬೆಂಬಲಿಸಿರುವ ಸುಹಾಸಿನಿಯವರೂ ಕೂಡಾ ಇದೇ ರೀತಿಯ ಟೀಕೆಗಳನ್ನು ಎದುರಿಸುತ್ತಿದ್ದಾರೆ. 21 ನೆಯ ಶತಮಾನದಲ್ಲಿ ನಡೆದಿರುವ ಈ ಘಟನೆ ಮಹಿಳೆಯರ ಬಗೆಗೆ, ಅವರ ಲೈಂಗಿಕ ಸ್ವಾತಂತ್ರ್ಯದ ಬಗೆಗಿರುವ ಪೂರ್ವಾಗ್ರಹಗಳನ್ನು ಸೂಚಿಸುತ್ತದೆ. ಮಹಿಳೆಯರ ಲೈಂಗಿಕತೆಯನ್ನು, ಪಾವಿತ್ರ್ಯತೆಯನ್ನು ಸಾಂಸ್ಕೃತೀಕರಣಗೊಳಿಸುವ ರಾಜಕೀಯ ಹುನ್ನಾರ ಇದು. ಸಾಹಿತ್ಯದಲ್ಲಿ ಮಹಿಳೆಯರ ಲೈಂಗಿಕ ವಿಚಾರಗಳನ್ನು ಮುಕ್ತವಾಗಿ ಮಾತನಾಡುವಂತಹ ಒಂದು ಸಾಂಸ್ಕೃತಿಕ ಪ್ರಯತ್ನಕ್ಕೆ ಬೆಲೆ ಸಿಗುತ್ತಿರುವಾಗ ಖುಷ್ಬೂ ವಿರುದ್ಧದ ಹುನ್ನಾರಗಳು ಖಂಡನೀಯವಾಗಿವೆ.

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

**ಸಂ.ಮಂಡಳಿ**

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :

**ಮಾನಸ**

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067